# 'ಅವಸ್ಥೆ' ಮತ್ತು 'ಮತದಾನ' ಕಾದಂಬರಿಗಳ ತೌಲನಿಕ ಅಧ್ಯಯನ

(ಕನ್ನಡ ಎಂ.ಫಿಲ್. ಪದವಿಗಾಗಿ ಹಂಪಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್ ನಿಬಂಧ)


ಸಂಶೋಧಕರು :

ರೂಬಿಯ

ಮಾರ್ಗದರ್ಶಕರು :

ಡಾ|| ಡಿ.ಕೆ. ರಾಜೇಂದ್ರ



[illegible]ಟಕ ಸಂಘ (ರಿ). ಮಂಡ್ಯ
[illegible]ಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)
೨೦೦೮-೦೯

# 'ಅವಸ್ಥೆ' ಮತ್ತು 'ಮತದಾನ'
# ಕಾದಂಬರಿಗಳ ತೌಲನಿಕ ಅಧ್ಯಯನ

(ಕನ್ನಡ ಎಂ.ಫಿಲ್. ಪದವಿಗಾಗಿ ಹಂಪಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್ ನಿಬಂಧ)





ಸಂಶೋಧಕರು :
ರೂಬಿಯ

ಮಾರ್ಗದರ್ಶಕರು :
ಡಾ॥ ಡಿ.ಕೆ. ರಾಜೇಂದ್ರ

ಕರ್ನಾಟಕ ಸಂಘ (ರಿ). ಮಂಡ್ಯ
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)
೨೦೦೮-೦೯

F63

# ಸಂಶೋಧಕನ ಪ್ರಮಾಣ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ ೨೦೦೮-೦೯ ನೇ ಸಾಲಿಗೆ ಕನ್ನಡ ಎಂ.ಫಿಲ್. ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್. ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು "ಅವಸ್ಥೆ ಮತ್ತು ಮತದಾನ" ಕಾದಂಬರಿಗಳ ತೌಲನಿಕ ಅಧ್ಯಯನ ವಿಷಯವನ್ನು ಆಯ್ಕೆ ಮಾಡಿಕೊಂಡು ಡಾ॥ ಡಿ.ಕೆ. ರಾಜೇಂದ್ರರವರ, ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತ ಕಾಲಿಕೆಗಳಲ್ಲಿ ಪ್ರಕಟಿಸಿರುವುದಿಲ್ಲ ಮತ್ತು ಕನ್ನಡ ವಿಶ್ವ ವಿದ್ಯಾಲಯವು ನೀಡುವ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ಸ್ಥಳ : ಮಂಡ್ಯ

ದಿನಾಂಕ : 29-09-09

(ರೂಬಿಯ)

ಸಂಶೋಧಕ, ಕನ್ನಡ ವಿಭಾಗ

ಕರ್ನಾಟಕ ಸಂಘ (ರಿ). ಮಂಡ್ಯ

ಎಂ.ಎಲ್. ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ. ಹಂಪಿ-ಮಾನ್ಯತೆ ಪಡೆದಿದೆ)

# ಮಾರ್ಗದರ್ಶಕರ ಪ್ರಮಾಣ ಪತ್ರ

ಅವಸ್ಥೆ ಮತ್ತು ಮತದಾನ ಕಾದಂಬರಿಗಳ ತೌಲನಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್. ಪದವಿಗಾಗಿ ರೂಬಿಯಾ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ಮೈಸೂರು
ದಿನಾಂಕ : 29.09.09

ಡಾ|| ಡಿ.ಕೆ. ರಾಜೇಂದ್ರ
ನಿರ್ದೇಶಕರು
ಪ್ರಸಾರಂಗ
ಕರಾಮುವಿ ವಿದ್ಯಾನಿಲಯ
ಮಾನಸ ಗಂಗೋತ್ರಿ, ಮೈಸೂರು

# 'ಅವಸ್ಥೆ' ಮತ್ತು 'ಮತದಾನ' ಕಾದಂಬರಿಗಳ ತೌಲನಿಕ ಅಧ್ಯಯನ

## ಪರಿವಿಡಿ

## ಅಧ್ಯಾಯ - ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಸಾಹಿತ್ಯ ನಿಂತ ನೀರಲ್ಲ. ಅದು ಹರಿಯುವ ಗಂಗೆಯಂತೆ ಸಾಹಿತ್ಯ ಸಮಾಜದ ಗತಿಬಿಂಬ ಮತ್ತು ಪ್ರತಿಬಿಂಬ.

ರಾಜಕೀಯ ವಸ್ತುವನ್ನಿಟ್ಟುಕೊಂಡು ಬಂದಿರುವ ಕಾದಂಬರಿಗಳೆಂದರೆ, ಅವಸ್ಥೆ, ಮತದಾನ, ದಾಟು ಮುಂತಾದವು. ಅದರಲ್ಲಿ 'ಅವಸ್ಥೆ' ಮತ್ತು 'ಮತದಾನ' ಈ ಎರಡು ಕಾದಂಬರಿಗಳನ್ನು ತೌಲನಿಕ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ರಾಜಕೀಯ ವಸ್ತುವನ್ನಿಟ್ಟುಕೊಂಡು ಬಂದಿರುವ ಕಾದಂಬರಿಗಳಲ್ಲಿ ಎರಡು ರೀತಿಯನ್ನು ಕಾಣಬಹುದಾಗಿದೆ. ಆಧುನಿಕ ಮನುಷ್ಯನ ಅದೃಷ್ಟವನ್ನು ರೂಪಿಸುವ ಶಕ್ತಿಯಾಗಿ ಅವನ ಕ್ರಿಯಾಶೀಲತೆಗೆ ಪ್ರೇರಕ ಒತ್ತಡಗಳಾಗಿ ರಾಜಕೀಯ ಸಂಸ್ಕೃತಿಯ ಜತೆ ಸಮೀಕರಿಸಿ ತೀರ್ಮಾನಗಳನ್ನು ಕೊಡುವುದು ಇನ್ನೊಂದು ರೀತಿ. ವ್ಯಕ್ತಿಯ ಮನೋಧರ್ಮಕ್ಕೆ ಅನುಗುಣವಾಗಿ ಮತ್ತು ಆತನ ಸುತ್ತಲಿನ ಪರಿಸರ, ವಿದ್ಯಾಭ್ಯಾಸ, ದೃಷ್ಟಿಕೋನ, ಅಭಿರುಚಿ ಮುಂತಾದವುಗಳಿಗೆ ಅನುಗುಣವಾಗಿ ಆತನ ಸೃಷ್ಟಿಕ್ರಿಯೆ ಕ್ರಿಯಾಶೀಲವಾಗಿರುತ್ತದೆ. ಈ ಎಲ್ಲಾ ಕಾರಣಗಳಿಂದಾಗಿಯೇ 'ಮತದಾನ' ಮತ್ತು 'ಅವಸ್ಥೆ' ಕಾದಂಬರಿಗಳು ವಿಭಿನ್ನವಾಗಿ ಮೂಡಿಬಂದಿದ್ದು ಇದಕ್ಕೆ ಕಾರಣ ಕಾದಂಬರಿಕಾರರ ವಿಭಿನ್ನವಾದ ಸೃಜನಶೀಲತೆ ಮತ್ತು ವಿಭಿನ್ನವಾದ ವ್ಯಕ್ತಿತ್ವ. ಈ ಕಾದಂಬರಿಗಳ ತೌಲನಿಕ ಅಧ್ಯಯನಕ್ಕೆ ಮೊದಲು ವಿಭಿನ್ನ ವ್ಯಕ್ತಿತ್ವದ ಈ ಲೇಖಕರ ಪರಿಚಯ ಅಗತ್ಯವಾಗಿದೆ.

ಯು.ಆರ್. ಅನಂತಮೂರ್ತಿಯವರು ಬ್ರಾಹ್ಮಣ ಕುಟುಂಬದಲ್ಲಿ ಜನಿಸಿ ಅಗ್ರಹಾರದಲ್ಲಿಯೇ ಆಡಿ ಬೆಳೆದವರು ಆ ನಂತರ ವಿದ್ಯಾಭ್ಯಾಸಕ್ಕಾಗಿ ಶಿವಮೊಗ್ಗ, ಮೈಸೂರು, ಬರ್ಮಿಂಗ್‌ಹ್ಯಾಮ್ ಹೀಗೆ ಹಲವಾರು ಕಡೆ ಸುತ್ತಾಡಿದವರು. ಅನುಭವದ ರಾಶಿ ರಾಶಿಯನ್ನು ಒಳಗೊಂಡ ಇವರ ಮನಕ್ಕೆ ಶಿವರಾಮ ಕಾರಂತರ ಬರಹಗಳು ಸ್ಫೂರ್ತಿ ನೀಡಿದವು. ಆ ಬಳಿಕ ಪಾಶ್ಚಿಮಾತ್ಯ ಬರಹಗಾರರಾದ ಗಾರ್ಕಿ, ಶೆಲ್ಲಿ, ಲಾರೆನ್ಸ್ ಮೊದಲಾದವರು ಪ್ರಭಾವ ಬೀರಿದರು. ಆನಂತರ ಕಾಫ್ಕಾ, ಕಾಮು, ಸಾರ್ಥ ಮುಂತಾದವರ ಬರಹಗಳು ಪ್ರಚೋದನೆ ನೀಡಿದವು. ಈ ಎಲ್ಲಾ ಕಾರಣಗಳಿಂದ ಇವರ ಬರಹಗಳು ಇತರ ಭಾರತೀಯ ಲೇಖಕರಿಗಿಂತ ಭಿನ್ನವಾಗಿ ಪಡಿ ಮೂಡಿವೆ.

ವಾಸ್ತವವಾದ, ಅಸ್ತಿತ್ವವಾದ, ಮಾರ್ಕ್ಸ್‌ವಾದಗಳಿಂದ ಪ್ರಭಾವಗೊಂಡು ಕೃತಿಯಲ್ಲಿ ಅವುಗಳನ್ನು ಸೂಚ್ಯವಾಗಿ ತರಲು ಯತ್ನಿಸಿದ್ದಾರೆ. ಆದರೆ, ಈ ಎಲ್ಲಾ ಅಂಗಗಳು ಕೃತಿಯ ದಿಕ್ಕನ್ನು ಬದಲಾಯಿಸದೇ ನಮ್ಮ ಸಂಸ್ಕೃತಿಗೆ ಮನೋಧರ್ಮಕ್ಕೆ ಮತ್ತು ನಮ್ಮ ಇಷ್ಟಾನಿಷ್ಟಗಳಿಗೆ ಅನುಗುಣವಾಗಿ ಸಹಜವಾಗಿ ಮೂಡಿಬಂದಿದೆ. ಯು.ಆರ್. ಅನಂತಮೂರ್ತಿಯವರು ಒಬ್ಬ ಸೃಜನಶೀಲ ಲೇಖಕರಾಗಿರುವಂತೆಯೇ ಉತ್ತಮ ಭಾಷಣಕಾರರು, ವಿಮರ್ಶಕರು, ಕಥೆಗಾರರು, ವಾಗ್ಮಿಗಳು ಆಗಿದ್ದಾರೆ.

ಅವಸ್ಥೆ ಕಾದಂಬರಿಯ ಕರ್ತೃವಾದ ಇವರು ತಮ್ಮನ್ನು ನಮ್ಮ ಪಂಥದಲ್ಲಿ ಗುರುತಿಸಿಕೊಂಡವರು ಸಾಹಿತ್ಯದ ಹಲವಾರು ಪ್ರಕಾರಗಳಲ್ಲಿ ಕೃಷಿ ಮಾಡಿದವರು. 'ಎಂದೆಂದೂ ಮುಗಿಯದ ಕಥೆ' 'ಪ್ರಶ್ನೆ' 'ಆಕಾಶ ಮತ್ತು ಬೆಕ್ಕು' 'ಸೂರ್ಯನ ಕುದುರೆ' ಮುಂತಾದವು ಇವರ ಕಥಾ ಸಂಕಲನಗಳು. 'ಭಾರತೀಪುರ' 'ಸಂಸ್ಕಾರ' 'ಅವಸ್ಥೆ' 'ಭವ' 'ಅಕ್ಕ' ಇವರ ಪ್ರಮುಖ ಕಾದಂಬರಿಗಳು.

'ಅವಸ್ಥೆ' ಕಾದಂಬರಿಯನ್ನು ದೃಷ್ಟಿಯಲ್ಲಿರಿಸಿಕೊಂಡು ನೋಡುವುದಾದರೆ ಅನಂತಮೂರ್ತಿ-ಯವರ ಸೃಜನಶೀಲ ಶೋಧನೆಗೆ ಒಳಪಡುವ ರಾಜಕೀಯ ತೀರ ಭಿನ್ನವಾದದ್ದು ಇದು ಆಧುನಿಕ ಮನುಷ್ಯನ ಸರ್ವಸ್ವವನ್ನು ವ್ಯಾಪಿಸುವಷ್ಟು ವಿಶಾಲ ಹರವುಳ್ಳದ್ದು. ಅವನನ್ನು ರೂಪಿಸುವಷ್ಟು ಶಕ್ತಿಯುತವಾದದ್ದು ಒಂದು ಕಾಲದಲ್ಲಿ ಧರ್ಮಕ್ಕಿಂತ ಸರ್ವವ್ಯಾಪ್ತಿತ್ವ ಈ ರಾಜಕೀಯಕ್ಕಿದೆ. ನಮ್ಮ ಸಂಸ್ಕೃತಿಯ ಅಂತಃಸತ್ವ ರಾಜಕೀಯವಾಗಿಯೂ ವ್ಯಕ್ತವಾಗಬೇಕಾದ ಚಾರಿತ್ರಿಕ ಅನಿವಾರ್ಯವನ್ನು ಸಾಹಿತ್ಯದ ಚೌಕಟ್ಟಿನಲ್ಲಿ ಇಟ್ಟು ನೋಡುವ ಪ್ರಯತ್ನ ಮಾಡಿದವರು ಅನಂತಮೂರ್ತಿ. ಅವರ ಅವಸ್ಥೆ ಕಾದಂಬರಿಯಲ್ಲಿ ಈ ಒತ್ತಡಗಳನ್ನು ಸೃಜನಶೀಲವಾಗಿ ಎದುರಿಸುವ ಪ್ರಯತ್ನ ಇಲ್ಲಿದೆ.

ರಾಜಕೀಯ ಕಾದಂಬರಿಯ ನೆಲೆಯಲ್ಲಿ 'ಅವಸ್ಥೆ' ಎಲ್ಲಾ ರಾಜಕೀಯ ಪ್ರಣಾಲಿಗಳ ಆಳದಲ್ಲಿ ಹುದುಗಿರತಕ್ಕ ದುರಂತ ಸತ್ಯದ ಬಗ್ಗೆ ಹೀಗೆ ಹೇಳುತ್ತದೆ. ಒಂದು ವ್ಯವಸ್ಥೆಯನ್ನು ಒಪ್ಪಿಕೊಂಡು ಅದರೊಳಗಿಂದಲೇ ಅದನ್ನು ಬದಲಾಯಿಸಲು ಮಾಡುವ ಯತ್ನ ಅಲ್ಪಸ್ವಲ್ಪ ಯಶಸ್ವಿಯಾದರೂ ಕೊನೆಗೆ ವ್ಯವಸ್ಥೆಯನ್ನೇ ಮತ್ತು ಭದ್ರಪಡಿಸುತ್ತದೆ. ಇದಕ್ಕೆ ಬದಲಾಗಿ ವ್ಯವಸ್ಥೆಯ ಹೊರಗೆ ನಿಂತು ಅದರ ಬದಲಾವಣೆಗೆ ಪ್ರಯತ್ನಿಸಿದರೆ ಆಗಬಹುದಾದ ಅಲ್ಪಸ್ವಲ್ಪ ಬದಲಾವಣೆಯೂ ವ್ಯವಸ್ಥೆಯನ್ನು ಒಪ್ಪಿಕೊಳ್ಳದೇ ಇರುವುದರಿಂದ ಸಾಧ್ಯವಾಗುವುದಿಲ್ಲ. ಅಕಸ್ಮಾತ್ ಕಾಲದೇಶ ಕೂಡಿಬಂದು ಹೊರಗಿನಿಂದಾದ ಪ್ರಯತ್ನಕ್ಕೆ ಯಶಸ್ಸು ಸಿಕ್ಕಿ ಒಂದು ವ್ಯವಸ್ಥೆ ಬುಡಮೇಲಾಗಿ ಉರುಳಿದರೂ ಅದರ ಜಾಗದಲ್ಲಿ ಮತ್ತೊಂದು ಪರ್ಯಾಯ ವ್ಯವಸ್ಥೆ ಅಸ್ತಿತ್ವಕ್ಕೆ ಬರುತ್ತದೆ. ಇರುವ ವ್ಯವಸ್ಥೆಯನ್ನು ಇರುವಂತೆಯೇ ಖುಷಿಯಿಂದ ಒಪ್ಪಿಕೊಳ್ಳುವ ಮತ್ತು ವ್ಯವಸ್ಥೆಯನ್ನು ಅದರ ಹೊರಗಿದ್ದು ಅದನ್ನು ಬುಡಮೇಲು ಮಾಡುವ ಸಮೀಕರಣಗಳನ್ನು ಕೃತಿ ಸಂಪೂರ್ಣವಾಗಿ ನಿರಾಕರಿಸುತ್ತದೆ.

ಒಂದು ಉತ್ತಮ ರಾಜಕೀಯ ಕಾದಂಬರಿ ಕೇವಲ ಅಧಿಕಾರದಲ್ಲಿರುವವರ ಅನೀತಿ, ದುರಾಚಾರ, ಕಪಟ ಇವುಗಳನ್ನು ಟೀಕಿಸುವುದರಲ್ಲಿಯೇ ತೃಪ್ತಿ ಹೊಂದುವುದಿಲ್ಲ. ಅದಕ್ಕಿಂತ ಆಳಕ್ಕೆ ಹೋಗಿ ರಾಜಕೀಯ ಯಾವುದೇ ವಿಧದ ಅಧಿಕಾರ ಕೇಂದ್ರಿತ ವ್ಯವಸ್ಥೆಗಳನ್ನು ಒಂದು ವೈಚಾರಿಕ ನೆಲೆಯಲ್ಲಿ ಪರೀಕ್ಷಿಸುತ್ತದೆ. ರಾಜಕೀಯ ಸಿದ್ಧಾಂತಗಳ ಗಂಭೀರ ಚಿಂತನೆ ಸಾಹಿತ್ಯವಾಗಿ ಅಭಿವ್ಯಕ್ತಗೊಂಡಾಗಲೇ ಒಂದು ಕೃತಿ ಉತ್ತಮ ರಾಜಕೀಯ ಕಾದಂಬರಿ ಎಂದೆನಿಸಿಕೊಳ್ಳುತ್ತದೆ. ಈ ನಿಟ್ಟಿನಲ್ಲಿ ನೋಡಿದರೆ 'ಅವಸ್ಥೆ' ಒಂದು ಗಂಭೀರ ರಾಜಕೀಯ ಕಾದಂಬರಿ. ಏಕೆಂದರೆ, ಅದು ಸಮರ್ಥವಾಗಿ ಒಂದು ವ್ಯವಸ್ಥೆಯ ಆಳದಲ್ಲಿರುವ – ಆ ವ್ಯವಸ್ಥೆ ಶಾಸಕ ಮತ್ತು ಶಾಸನಯಂತ್ರ ಇವುಗಳನ್ನೊಳಗೊಂಡಿರಬಹುದು. ಅಥವಾ ಮಾಲೀಕ ವರ್ಗ ನೌಕರವರ್ಗ ಇವರುಗಳ ಮಧ್ಯೆ ಸಂಪರ್ಕ ಕಲ್ಪಿಸುವ ಟ್ರೇಡ್ ಯೂನಿಯನ್ ವ್ಯವಸ್ಥೆಯಾಗಿರಬಹುದು. (ಇಂಗ್ಲೀಷಿನಲ್ಲಿ ಡಿಸ್ರೇಲಿಯ 'ಸಿಬಿಲ್' ಕೃತಿಯಂತೆ ಅಥವಾ ಕನ್ನಡದಲ್ಲಿ ವ್ಯಾಸರಾಯ ಬಲ್ಲಾಳರ 'ಬಂಡಾಯ' ದಂತ) ಯಾವುದೇ ವ್ಯವಸ್ಥೆಯ ಆಳದಲ್ಲಿ ಅನಿವಾರ್ಯವಾಗಿರುವ ದ್ವಂಧ್ವಾತ್ಮಕ ಸ್ಥಿತಿಯನ್ನು ಮತ್ತು ಪರಸ್ಪರ ವಿರೋಧಾತ್ಮಕ ಗುಣಗಳನ್ನು 'ಅವಸ್ಥೆ' ನಿಖರವಾಗಿ ಪರಿಣಾಮಕಾರಿಯಾಗಿ ಗುರುತಿಸುತ್ತವೆ.

'ಅವಸ್ಥೆ' ನಮ್ಮ ರಾಜಕೀಯ ಸಂಸ್ಕೃತಿಯ ಇತಿಮಿತಿಗಳನ್ನು ತಳಮಟ್ಟ ಶೋಧಿಸುವ ಹಂಬಲವುಳ್ಳ ಕೃತಿ. ಕೃಷ್ಣಪ್ಪ ಪ್ರತಿನಿಧಿಸುವ ರಾಜಕೀಯ ಪರಿಸರ ಅತ್ಯಂತ ವೈವಿಧ್ಯಮಯವಾದ ಜೀವನ ಧೋರಣೆಗಳಿಂದ ಶ್ರೀಮಂತವಾಗಿದೆ. ಕಾದಂಬರಿಯ ಕೇಂದ್ರ ಲಕ್ಷ್ಯವನ್ನು ಈ ಪರಿಸರವೇ ನಿಯಂತ್ರಿಸುತ್ತದೆ. ಈ ಪರಿಸರದ ಬೇರೆ ಬೇರೆ ಪದರುಗಳನ್ನು ಅವಲೋಕಿಸುವುದರ ಮೂಲಕ ಕೃಷ್ಣಪ್ಪನ ಹಾಗೂ ಕಾದಂಬರಿಯ ಪ್ರಮುಖ ಸೆಳೆತ ದರ್ಶನವಾಗಲು ಸಾಧ್ಯವಿದೆ.

ಎಸ್.ಎಲ್. ಭೈರಪ್ಪನವರು ಅತ್ಯುತ್ತಮ ಕಾದಂಬರಿಕಾರರು, ಕಥನ ಕಲೆ ಅವರಲ್ಲಿ ಅದ್ಭುತವಾಗಿ ಮೈಗೂಡಿದೆ. ಇವರು ಸಂಪ್ರದಾಯವಾದಿಗಳು ಅಷ್ಟೆ ಅಲ್ಲದೆ ವೈಚಾರಿಕ ಲೇಖಕರು. ಹಳೆಯ ಸಂಪ್ರದಾಯಗಳನ್ನು ಆಚಾರ–ವಿಚಾರಗಳನ್ನು ಅಂದಿನ ತಾಂತ್ರಿಕ ಹಿನ್ನೆಲೆಯಲ್ಲಿ ಇಂದಿನ ವೈಚಾರಿಕತೆಗೆ ಅನುಗುಣವಾಗಿ ವಿಶ್ಲೇಷಿಸುವರು.

ಇವರು ತತ್ವಶಾಸ್ತ್ರವನ್ನು ಆಳವಾಗಿ ಅಭ್ಯಸಿಸಿದವರು. ಅದರ ಜೊತೆಗೆ ಸೌಂದರ್ಯ ಮೀಮಾಂಸೆ, ಜ್ಞಾನಮೀಮಾಂಸೆ, ಮೌಲ್ಯ ಮೀಮಾಂಸಗಳನ್ನು ಅಧ್ಯಯನ ಮಾಡಿದವರು.

"ಮನುಷ್ಯನ ಸ್ವಭಾವ, ಆಸೆ, ಆಕಾಂಕ್ಷೆ, ಉನ್ನತ ನೀಚ ಪ್ರವೃತ್ತಿಗಳು ಮೊದಲಾದವುಗಳನ್ನು ಆರಿಸಿ ಕಂಡುಕೊಳ್ಳಬೇಕಾದುದು ಸತ್ಯದಲ್ಲೆ ಹೊರತು ಬಾಹ್ಯ ಜಗತ್ತನ್ನು ಅಳೆಯುವ ಭೌತ ಖಗೋಳ,

ಭೌತಶಾಸ್ತ್ರದ ಸತ್ಯದಲ್ಲಲ್ಲ; ಇದರ ಆಚೆಗೆ ಜಿಜ್ಞಾಸೆ ಮಾಡುವ ತತ್ವಶಾಸ್ತ್ರದ ಸತ್ಯದಲ್ಲಲ್ಲ. ಮನುಷ್ಯ ಜೀವನದ ಆಚೆ ಮತ್ತು ಈಚೆಗಿನ ಪ್ರಶ್ನೆಗಳನ್ನು ಚಿಂತಿಸುವ ಮತಧರ್ಮದ ಸತ್ಯಗಳನ್ನು ಅಲ್ಲ. ಸತ್ಯವನ್ನು ಮೂರ್ತ ರೂಪದಲ್ಲಿ ಅನ್ವೇಷಿಸುವುದು ಸಾಹಿತ್ಯವೊಂದೆ ಎಂಬುದು ಅರ್ಥವಾಯಿತು".[೧] ಭೈರಪ್ಪನವರು ಈ ಮೇಲಿನ ಹಿನ್ನೆಲೆಯ ಕಾರಣದಿಂದಲೇ ಸೃಷ್ಟಿಕ್ರಿಯೆಗೆ ತೊಡಗಿದವರು. ಇವರ ಎಲ್ಲಾ ಕಾದಂಬರಿಗಳು ಧ್ವನಿಸುವುದು ಈ ಅಂಶಗಳನ್ನು ಭೈರಪ್ಪನವರ 'ಮತದಾನ' ಕಾದಂಬರಿಯನ್ನು ಸಹಜವಾಗಿ ನೋಡಿದಾಗ, ಯಾವುದೋ ಚುನಾವಣೆಯ ಗ್ರಂಥವಿರಬೇಕೆಂದು ಕಲ್ಪನೆ ಬರುವುದುಂಟು. ವಿಧಾನಸಭೆಯ ಚುನಾವಣೆ ಇರುವುದರ ಜೊತೆಗೆ ಬದುಕಿನ ಬಗ್ಗೆ ತನ್ನ ಬಗ್ಗೆ ತನ್ನ ಮತ ನೀಡುವ ಒಬ್ಬ ಪ್ರಾಮಾಣಿಕ ಗಾಂಧೀಜಿಯವರ ಕಾಲದ ನಿಸ್ವಾರ್ಥ ಸಮಾಜ ಸೇವಕ ಡಾಕ್ಟರ್‌ನ ಜೀವನೋದ್ದೇಶ ಇಲ್ಲಿ ಅಡಕವಾಗಿದೆ. ಅವನನ್ನು ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಳ್ಳಬೇಕೆನ್ನುವ ಇವತ್ತಿನ ವಾಸ್ತವಿಕ ರಾಜಕಾರಣಿಗಳ ಮತ್ತು ಅಂಥವರ ರಕ್ತ ಸಂಬಂಧಕ್ಕಾಗಿ ಒದ್ದಾಡುವವರ ಚಿತ್ರಣವು ಇದರಲ್ಲಿದೆ.

ರಾಜಕಾರಣದ ಪರಮ ಗುರಿ ಅಧಿಕಾರ ಗ್ರಹಣ. ಅಧಿಕಾರದ ಚುಕ್ಕಾಣಿ ಹಿಡಿಯಲು ರಾಜಕಾರಣಿ ಹಿಡಿಯುವ ಹಾದಿಗಳಲ್ಲಿ ಬಳಸಿದ ವಿಧಿ-ವಿಧಾನಗಳಲ್ಲಿ ಸುಳಿ, ಒಳಸುಳಿ, ಹುನ್ನಾರ-ಒಳಹುನ್ನಾರ, ಸುಳ್ಳು, ತಟವಟ, ಮೋಸವಂಚನೆ ಎಲ್ಲ ಇಲ್ಲಿ ಸಾಮಾನ್ಯ! ಸ್ನೇಹ ನಂಜಿಸುತ್ತಲೇ ಬೆನ್ನಲ್ಲಿ ಚೂರಿ ಹಾಕುವುದು; ಕಂಡವರ ಮಕ್ಕಳನ್ನು ತಳ್ಳಿ ಆಳ ನೋಡುವುದು. ಆದರ್ಶಗಳ ಬಡಾಯಿ ಕೊಚ್ಚಿಕೊಳ್ಳುತ್ತಲೆ ಅವುಗಳ ಅವಸಾನಕ್ಕೆ ಕೈ ಹಚ್ಚುವುದು ಮುಂತಾದುವೆಲ್ಲಾ ಇಲ್ಲಿ ಬಹಳ ಸಲೀಸು! ಸೂಕ್ಷ್ಮವಲೋಕನ ಪ್ರಜ್ಞೆಯುಳ್ಳ ಭೈರಪ್ಪನವರು ರಾಜಕಾರಣದ ಬಹುಮುಖಿ ಆಟ-ಆವುಟಗಳ ಸಮರ್ಥ ಚಿತ್ರಣವನ್ನು 'ಮತದಾನದಲ್ಲಿ' ಕೊಟ್ಟಿದ್ದಾರೆ.

ಆಧುನಿಕ ಜೀವನವು ಸಂಕೀರ್ಣವಾಗಿರುವುದರಿಂದ ಅದರಲ್ಲಿ ವ್ಯವಸ್ಥಿತವಾಗಿ ಇರುವುದಕ್ಕೆ ಹಿಂದಿಗಿಂತಲೂ ಇಂದು ರಾಜಕೀಯತೆ ಹೆಚ್ಚು ಹೆಚ್ಚು ಅನಿವಾರ್ಯವಾಗಿರಬಹುದು. ಗ್ರೀಕ್ ತತ್ವಜ್ಞಾನಿ ಅರಿಸ್ಟಾಟಲ್ "ರಾಜಕೀಯ ಸಮಾಜ ಬದುಕಿಗೋಸ್ಕರ ಇರುತ್ತದೆ ಮತ್ತು ಅದು ಒಳ್ಳೆಯ ಬದುಕನ್ನು ಸಾಧಿಸುವುದಕ್ಕೋಸ್ಕರ ಅಸ್ತಿತ್ವದಲ್ಲಿ ಮುಂದುವರಿಯುತ್ತದೆ" ಎಂದು ಹೇಳಿದ ರಾಜ್ಯವೂ ರಾಜಕೀಯವೂ ಅನಿವಾರ್ಯ ಪ್ರಜಾಪ್ರಭುತ್ವದ ರಾಜಕೀಯದಲ್ಲಿ ಮತದಾನವು ಒಂದು ಮುಖ್ಯ ಅಂಶ ಮತ್ತು ಹಕ್ಕು. ಅದರ ಮುಖಾಂತರ ವ್ಯಕ್ತಿಗಳೂ, ಪಕ್ಷಗಳೂ ರಾಜಕೀಯ ಶಕ್ತಿಯನ್ನು ಪಡೆಯುತ್ತದೆ. ಆದರೆ, ಈ 'ಮತದಾನ' ಮತ್ತು ಅದರ ಹಿನ್ನೆಲೆಯಲ್ಲಿ ನಡೆಯುವ ವಿಪರೀತ ಗೊಂದಲವು ಇನ್ನೂ ಪ್ರಜಾಪ್ರಭುತ್ವ ಪದ್ಧತಿಯನ್ನು ಸರಿಯಾಗಿ ಅರ್ಥಮಾಡಿಕೊಂಡಿರದ ಭಾರತೀಯ ಜೀವನದ ಮೌಲ್ಯಗಳನ್ನು ಹೇಗೆ

---

೧. ಎಸ್.ಎಲ್. ಭೈರಪ್ಪ : ನಾನೇಕೆ ಬರೆಯುತ್ತೇನೆ? - ಪುಟ - ೨

ಅಸ್ವಸ್ಥವಾಗಿಸಬಹುದೆಂಬುದು ಭೈರಪ್ಪನವರ ಕಾದಂಬರಿ 'ಮತದಾನ'ದ ಮುಖ್ಯ ಸಮಸ್ಯೆ ರಾಜಕೀಯ ಯಶಸ್ವಿಯಾಗಿ ಬದುಕಿನ ಎಲ್ಲ ಮುಖಗಳನ್ನು (ಪ್ರೀತಿ, ವಿಶ್ವಾಸ, ದೇವರು, ಜಾತಿ, ಧರ್ಮ, ಹಣ ಇತ್ಯಾದಿ) ಉಪಯೋಗಿಸಿಕೊಳ್ಳುವುದು ನಡೆದಿದೆ. ಇಂಥ ಒಂದು ವಿಷಯವನ್ನು 'ಮತದಾನ'ವು ಸಾಕಷ್ಟು ಪರಿಣಾಮಕಾರಿಯಾಗಿ ವಿವೇಚಿಸುತ್ತದೆ.

ಮನುಷ್ಯ ಪರಿಸ್ಥಿತಿಯ ಕೈಗೊಂಬೆ ಎಂಬುದು ಬಹಳ ಪ್ರಸಿದ್ಧವಾದ ಮಾತು. ಇದು ಎರಡು ಕಾದಂಬರಿಗಳಿಗೂ ಅನ್ವಯವಾಗುತ್ತದೆ. ಎರಡೂ ಕೃತಿಗಳಲ್ಲಿ ಸಾಮ್ಯತೆ ಇದ್ದರೂ ಅನಂತಮೂರ್ತಿ-ಯವರಲ್ಲಿನ ಪಾತ್ರಗಳು ಪರಿಸ್ಥಿತಿಯೊಂದಿಗೆ ಅದರ ಕಪಿಮುಷ್ಠಿಗೆ ಸಿಲುಕಿ ಒದ್ದಾಡುತ್ತದೆ. ಇಲ್ಲಿ ವ್ಯಕ್ತಿಯ ವ್ಯಕ್ತಿತ್ವದ ಪ್ರಶ್ನೆಯೇ ಇಲ್ಲ. ಅಸ್ಥಿತ್ವವೇ ಇಲ್ಲದ ಪಾತ್ರವಾಗಿ ಇವು ಕಂಡು ಬರುತ್ತದೆ. ಅವು ಹೀಗೆ ಎಂಬುದನ್ನು ಮುಂದಿನ ಅಧ್ಯಾಯಗಳಲ್ಲಿ ನೋಡಬಹುದಾಗಿದೆ.

ಆದರೆ, ಭೈರಪ್ಪನವರು ಸೃಷ್ಟಿಸಿದ ಪಾತ್ರಗಳು ಪರಿಸ್ಥಿತಿಯ ಕೂಸುಗಳಾದರೂ ತಮ್ಮತನವನ್ನು ಉಳಿಸಿಕೊಂಡಿವೆ. ಪರಿಸ್ಥಿತಿ ಒಡ್ಡುವ ಸಮಸ್ಯೆಗಳಿಗೆ ಎದುರಾಗಿ ಧೈರ್ಯವಾಗಿ ಸಂಘರ್ಷ-ಕ್ಕಿಳಿಯುತ್ತವೆ. ಕೆಲವು ಪಾತ್ರಗಳು ಜಯವನ್ನು ಗಳಿಸುತ್ತದೆ. ಮಾನವ ಶಕ್ತಿಯ ಅಗಾಧತೆಯನ್ನು ಆತನ ಮನೋದಾರ್ಢ್ಯವನ್ನು ಎತ್ತಿ ಹಿಡಿಯುವ ಈ ಕಾದಂಬರಿಗಳನ್ನು ವಿಶ್ಲೇಷಣೆ ಮಾಡುವುದು ಈ ಅಧ್ಯಯನದ ಉದ್ದೇಶವಾಗಿದೆ.

ಎರಡೂ ಕಾದಂಬರಿಗಳೂ ಭಿನ್ನ ಸ್ವರೂಪದವಾಗಿದ್ದು ಇಲ್ಲಿನ ಭೌದ್ಧಿಕತೆ, ನೈತಿಕತೆ, ವೈಚಾರಿಕತೆ ಮತ್ತು ಸಾಂಸ್ಕೃತಿಕತೆಯನ್ನು ಅವುಗಳ ಮಟ್ಟ ಕೃತಿಗಳಲ್ಲಿ ಹೇಗೆ ಪಡಿಮೂಡಿದೆ ಎಂಬುದನ್ನು ತಿಳಿಯಲು ಈ ತೌಲನಿಕ ಅಧ್ಯಯನವನ್ನು ಮಾಡಲಾಗಿದೆ. ಎರಡೂ ಕಾದಂಬರಿಗಳ ವಸ್ತು ಒಂದೇ ಆಗಿದ್ದರೂ ಅವುಗಳ ಮಾರ್ಗ ಮಾತ್ರ ಭಿನ್ನವಾಗಿದೆ. ಈ ನಿಟ್ಟಿನಲ್ಲಿ ಕಾದಂಬರಿಗಳನ್ನು ಅಭ್ಯಾಸಿಸುತ್ತಾ ಹೋದಂತೆ ಇಲ್ಲಿನ ಪಾತ್ರಗಳಲ್ಲಿ, ಸನ್ನಿವೇಶಗಳಲ್ಲಿ, ಘಟನೆಗಳಲ್ಲಿ ಹೋಲಿಕೆ ಇದೆ ಎನಿಸಿದರೂ ಅವುಗಳ ಮನೋಧರ್ಮ ಸಮಸ್ಯೆಯನ್ನು ಎದುರಿಸುವಲ್ಲಿ ಇರುವ ಮನೋದಾರ್ಢ್ಯ ಇತ್ಯಾದಿಗಳನ್ನು ನೋಡಿದಾಗ ಸೂಕ್ಷ್ಮ ವ್ಯತ್ಯಾಸಗಳು ಕಂಡುಬಂದು ಕ್ರಮೇಣ ಈ ವ್ಯತ್ಯಾಸಗಳು ಸಂಕೀರ್ಣತೆಯತ್ತ ಮುಖ ಮಾಡಿದ್ದು ಕಂಡುಬರುತ್ತದೆ. ಇದಕ್ಕೆ ಕಾರಣವೆಂದರೆ ಲೇಖಕರ ಮನೋಧರ್ಮದಲ್ಲಿನ ವ್ಯತ್ಯಾಸ.

ಒಂದೇ ವಸ್ತು ಹೇಗೆ ಇಬ್ಬರು ವ್ಯಕ್ತಿಗಳಲ್ಲಿ ಉಂಟುಮಾಡಿರುವ ವಿಭಿನ್ನ ರೀತಿಯ ಚಿಂತನೆಯನ್ನು ವಿಶ್ಲೇಷಿಸುವುದು ಹಾಗೂ ವಿಭಿನ್ನ ದೃಷ್ಟಿಕೋನದ ವಿಭಿನ್ನ ಮನೋಧರ್ಮದ ಈ ಲೇಖಕರಲ್ಲಿ ಹೇಗೆ ವಿಷಯ ನಿರೂಪಣೆಗೊಂಡಿದೆ ಎಂಬುದನ್ನು ನಿರೂಪಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

## ಅಧ್ಯಾಯ - ೨

# ಎರಡೂ ಕಾದಂಬರಿಗಳ ಸ್ವರೂಪ ಮತ್ತು ಕಥಾವಿನ್ಯಾಸ

"ಅವಸ್ಥೆ" – ಈ ಕಾದಂಬರಿಯ ಕರ್ತೃವಾದ ಅನಂತಮೂರ್ತಿಯವರು ನವ್ಯ ಪಂಥದಲ್ಲಿ ತಮ್ಮನ್ನು ಗುರುತಿಸಿಕೊಂಡವರು. ಕನ್ನಡ ಸಾಹಿತ್ಯದ ಹಲವಾರು ಪ್ರಕಾರಗಳಲ್ಲಿ ಕೃಷಿ ಮಾಡಿದವರು. ಹಲವಾರು ಉತ್ತಮವಾದ ಕಾದಂಬರಿಗಳನ್ನು ಕೊಟ್ಟಿದ್ದಾರೆ.

ಅನಂತಮೂರ್ತಿಯವರು ೧೯೩೨ ಡಿಸೆಂಬರ್ ೩೧ ರಂದು ಶಿವಮೊಗ್ಗ ಜಿಲ್ಲೆಯ ಮೇಳಿಗೆಯಲ್ಲಿ ಜನಿಸಿದರು. ಇವರ ಹಿರಿಯರು ಉಡುಪಿಯ ಶಿವಳ್ಳಿ ಬ್ರಾಹ್ಮಣರು. ಇವರ ಪ್ರಾಥಮಿಕ ವಿದ್ಯಾಭ್ಯಾಸವು ಮೇಳಿಗೆ ಜೇಗವಳ್ಳಿ, ತೀರ್ಥಹಳ್ಳಿಯ ಪ್ರಾಥಮಿಕ ಶಾಲೆಗಳಲ್ಲಿ ನಡೆಯಿತು. ೧೯೩೦ ರಿಂದ ೪೦ ರ ದಶಕಗಳಲ್ಲಿ ತೀರ್ಥಹಳ್ಳಿ ತಾಲ್ಲೂಕಿನ ಹಳ್ಳಿಗಳಲ್ಲಿ ಗಾಂಧೀಜಿಯ ಪ್ರಭಾವ ಆರಂಭಗೊಂಡಿತ್ತು. ಇವರ ತಂದೆ ಗಾಂಧೀಜಿಯ 'ಹರಿಜನ ಪತ್ರಿಕೆ' ತರಿಸುತ್ತಿದ್ದರು. ಅನಂತಮೂತಿಯವರು ಬರೆದಿರುವಂತೆ ಮಹಾತ್ಮಾ ಗಾಂಧಿ ಅಗ್ರಹಾರದ ನಮ್ಮನ್ನು ಗೊಂದಲಗೊಳಿಸಿದರು. ಕೆಲವರಿಗೆ ಅವರು ವೈದಿಕ ಸಂತರಂತೆ ಕಂಡರೆ, ಹರಿಜನರನ್ನು ದೇವಾಲಯಗಳಿಗೆ ಪ್ರವೇಶಿಸುವಂತೆ ಮಾಡಿ ವರ್ಣಸಂಕಲಕ್ಕೆ ಕಾರಣನಾದ ಕಾಪುರಷನಂತೆಯೂ ಕಾಣುತ್ತಿದ್ದರು. "ಮಠದ ಪರಿಸರದಲ್ಲಿ ನಡೆಯುತ್ತಿದ್ದ ಸಂಜೆಯ ದೀರ್ಘವಾದ ಪೂಜಾ ವಿಧಿಗಳು, ಕಾರ್ತಿಕ ಮಾಸದ ಹಬ್ಬಗಳು, ಹರಿಕಥೆಗಳು, ಪಾಂಡಿತ್ಯ ಪೂರ್ಣ ಪಾರಮಾರ್ತಿಕ ಚರ್ಚೆಗಳು, ನನ್ನ ಕೆಲವು ನೆರೆಹೊರೆಯವರ ಸರಳವಾದ ಧಾರ್ಮಿಕ ಜೀವನ, ಜೊತೆಯಲ್ಲಿ ಜಾತಿ ಹೆಮ್ಮೆಯ ಹುಸಿರುಗಟ್ಟಿಸುವ ವಾತಾವರಣ, ನಮ್ಮವರಲ್ಲದವರ ಬಗ್ಗೆ ನಮಗಿದ್ದ ತಿರಸ್ಕಾರ ದೃಷ್ಟಿ, ಒಡ ಗೇಣಿದಾರರ ಜೊತೆ ಮಠದವರು ನಡೆಸುತ್ತಿದ್ದ ಕೊನೆಯಿಲ್ಲದ ಕೋರ್ಟು ವ್ಯಾಜ್ಯಗಳು, ಇವೆಲ್ಲವೂ ಒಟ್ಟಾಗಿ ನನ್ನ ಸಂಸ್ಕೃತಿಯ ಉಗ್ರಾಣದ ರೂಪಕಗಳಾಗಿವೆ" ಎನ್ನುತ್ತಾರೆ ಅನಂತಮೂರ್ತಿ.

ಡಾ॥ ಯು.ಆರ್. ಅನಂತಮೂರ್ತಿರವರು ಪಡೆದ ಕೆಲವು ಪ್ರಶಸ್ತಿಗಳು. ಮೈಸೂರು ವಿಶ್ವವಿದ್ಯಾಲಯದ ಇಂಗ್ಲೀಷ್ ಎಂ.ಎ. ನಲ್ಲಿ ಸುವರ್ಣ ಪದಕ (೧೯೫೬), ಸಂಸ್ಕಾರ ಮತ್ತು ಘಟಶ್ರಾದ್ಧ ಕಥೆಗೆ (೧೯೭೮) ಕರ್ನಾಟಕ ಫಿಲ್ಮ್ ಡೆವಲಪೆಮೆಂಟ್ ಕಾರ್ಪೋರೇಷನ್ನಿನ ಪ್ರಶಸ್ತಿ. ೧೯೮೩ ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. ಸ್ವಾಮೀಜಿಯವರಿಂದ ಸಮಾಜ ಭೂಷಣ ಪ್ರಶಸ್ತಿ. ೧೯೫ ರಲ್ಲಿ ಕಲ್ಕತ್ತದ ರವೀಂದ್ರ ಭಾರತಿ ವಿಶ್ವವಿದ್ಯಾನಿಲಯದ ಗೌರವ ಡಿಲಿಟ್ ಪ್ರಶಸ್ತಿ ಮತ್ತು ಹಿಮಾಚಲ

ಪ್ರದೇಶ ಸರಕಾರದ ಶಿಖರ್ ಸನ್ಮಾನ್. ೧೯೯೮ ರಲ್ಲಿ ಭಾರತ ಸರ್ಕಾರದ ಪದ್ಮಭೂಷಣ ಪ್ರಶಸ್ತಿಗಳು ಬಂದಿದೆ.

ಮಲೆನಾಡಿನ ಸುಂದರ ಪರಿಸರದಲ್ಲಿ ಜನಿಸಿ, ಮೈಸೂರು ವಿದ್ವತ್ ಪರಿಸರದಲ್ಲಿ ಗೋಪಾಲಕೃಷ್ಣ ಅಡಿಗ, ಕೆ. ಸದಾಶಿವ, ಚದುರಂಗ, ಕೆ.ವಿ. ಸುಬ್ಬಣ್ಣ ಇವರಂಥ ಕವಿ ಸಹೃದಯ ಸಾಕ್ಷಿ ಸಮುಧಾಯದಲ್ಲಿ ಸುಟ್ಟಲ್ಲದೆ ಮುಟ್ಟಿ ನೋಡದ ವಿಚಾರ ಪ್ರಕರತೆಯ ಅಗ್ನಿಯಿಂದಲೇ ದಹಿಸಿಕೊಳ್ಳುತ್ತಾ ತಮ್ಮ ವ್ಯಕ್ತಿತ್ವ ರೂಪಿಸಿಕೊಂಡ ಯು.ಆರ್. ಅನಂತಮೂರ್ತಿ ಕನ್ನಡದ ನವ್ಯ ಮಾರ್ಗದಲ್ಲಿ ಅಡಿಗರ ಅನಂತರದ ದೊಡ್ಡ ಹೆಸರು. ಕಥನ ಕಲೆಯಲ್ಲಿ ಮಾಸ್ತಿ ಪರಂಪರೆಯನ್ನು ಹೊಸ ಆಯಾಮದೊಂದಿಗೆ ವಿಸ್ತರಿಸಿದ ಕಥೆಗಾರ. ಅವರ ಕೃತಿಗಳಲ್ಲಿ ಸಂಸ್ಕಾರ, ಭಾರತೀಪುರ, ಅವಸ್ಥೆ, ಕಾದಂಬರಿಗಳು ಓದುಗರ ಹಾಗೂ ವಿಮರ್ಶಕರ ದೃಷ್ಟಿಯಲ್ಲಿ ಉಳಿದ ಕೃತಿಗಳಿಗಿಂತ ಮಹತ್ವದ ಸ್ಥಾನವನ್ನು ಪಡೆದಿವೆ.

ಕನ್ನಡದಲ್ಲಿ ಬಂದಿರುವ ಕೆಲವೇ ಕೆಲವು ಗಂಭೀರ ರಾಜಕೀಯ ಕಾದಂಬರಿಗಳಲ್ಲಿ 'ಅವಸ್ಥೆ' ಕೂಡ ಒಂದು ಉತ್ತಮ ರಾಜಕೀಯ ಕಾದಂಬರಿ – ನಾಟಕ ಕೇವಲ ಅಧಿಕಾರದಲ್ಲಿರುವವರ ಅನೀತಿ, ದುರಾಚಾರ, ಕಪಟ ಇವುಗಳನ್ನು ಟೀಕಿಸುವುದರಲ್ಲಿಯೇ ತೃಪ್ತಿ ಹೊಂದುವುದಿಲ್ಲ. ಅದಕ್ಕಿಂತ ಆಳಕ್ಕೆ ಹೋಗಿ ರಾಜಕೀಯ ಅಂದರೆ ಯಾವುದೇ ವಿಧದ ಅಧಿಕಾರಕೇಂದ್ರಿತ ವ್ಯವಸ್ಥೆಗಳನ್ನು ಒಂದು ವೈಚಾರಿಕ ನೆಲೆಯಲ್ಲಿ ಪರೀಕ್ಷಿಸುತ್ತದೆ. ರಾಜಕೀಯ ಸಿದ್ಧಾಂತಗಳ ಗಂಭೀರ ಚಿಂತನೆ ಸಾಹಿತ್ಯಿಕವಾಗಿ ಅಭಿವ್ಯಕ್ತಿಗೊಂಡಾಗಲೇ ಒಂದು ಕೃತಿ ಉತ್ತಮ ರಾಜಕೀಯ ಕಾದಂಬರಿ ನಾಟಕ ಕಥೆ ಎಂದೆನಿಸಿಕೊಳ್ಳುತ್ತದೆ. 'ಅವಸ್ಥೆ' ಒಂದು ಗಂಭೀರ ರಾಜಕೀಯ ಕಾದಂಬರಿ. ಏಕೆಂದರೆ, ಅದು ಸಮರ್ಥವಾಗಿ ಒಂದು ವ್ಯವಸ್ಥೆಯ ಆಳದಲ್ಲಿರುವ – ಆ ವ್ಯವಸ್ಥೆ ಶಾಸಕ ಮತ್ತು ಶಾಸನಯಂತ್ರ ಇವುಗಳನ್ನೊಳಗೊಂಡಿರಬಹುದು ಅಥವಾ ಮಾಲೀಕವರ್ಗ ನೌಕರವರ್ಗ ಇವರುಗಳ ಮಧ್ಯೆ ಸಂಪರ್ಕ ಕಲ್ಪಿಸುವ ಟ್ರೇಡ್ ಯೂನಿಯನ್ ವ್ಯವಸ್ಥೆಯಾಗಿರಬಹುದು. ಯಾವುದೇ ವ್ಯವಸ್ಥೆಯ ಆಳದಲ್ಲಿ ಅನಿವಾರ್ಯವಾಗಿರುವ ದ್ವಂದ್ವಾತ್ಮಕ ಸ್ಥಿತಿಯನ್ನು ಮತ್ತು ಪರಸ್ಪರ ವಿರೋದಾತ್ಮಕ ಗುಣಗಳನ್ನು 'ಅವಸ್ಥೆ' ನಿಖರವಾಗಿ, ಪರಿಣಾಮಕಾರಿಯಾಗಿ ಗುರುತಿಸುತ್ತದೆ.

ಅನಂತಮೂರ್ತಿಯವರ ಸೃಜನಶೀಲ ಶೋಧನೆಗೆ ಒಳಪಡುವ ರಾಜಕೀಯ ತೀರ ಭಿನ್ನವಾದುದ್ದು. ಅದು ಆಧುನಿಕ ಮನುಷ್ಯನ ಸರ್ವಸ್ವವನ್ನು ವ್ಯಾಪಿಸುವಷ್ಟು ವಿಶಾಲ ಹರವು ಉಳ್ಳದ್ದು; ಅವನನ್ನು ರೂಪಿಸುವಷ್ಟು ಶಕ್ತಿಯುತವಾದದ್ದು. ಒಂದು ಕಾಲದಲ್ಲಿ ಧರ್ಮಕ್ಕಿಂತ ಸರ್ವವ್ಯಾಪ್ತಿತ್ವ ಈ ರಾಜಕೀಯಕ್ಕಿದೆ. ನಮ್ಮ ಸಂಸ್ಕೃತಿಯ ಅಂತಃಸತ್ವ ರಾಜಕೀಯವಾಗಿಯೂ ವ್ಯಕ್ತವಾಗಬೇಕಾದ ಚಾರಿತ್ರಿಕ ಅನಿವಾರ್ಯವನ್ನು ಸಾಹಿತ್ಯಿಕ ಚೌಕಟ್ಟಿನಲ್ಲಿ ಇಟ್ಟು ನೋಡುವ ಪ್ರಯತ್ನ ಮಾಡಿದವರು ಅನಂತಮೂರ್ತಿ.

'ಅವಸ್ಥೆ' ನಮ್ಮ ರಾಜಕೀಯ ಸಂಸ್ಕೃತಿಯ ಇತಿಮಿತಿಗಳನ್ನು ತಳಮಟ್ಟ ಶೋಧಿಸುವ ಹಂಬಲವುಳ್ಳ ಕೃತಿ. ಕೃಷ್ಣಪ್ಪ ಪ್ರತಿನಿಧಿಸುವ ರಾಜಕೀಯ ಪರಿಸರ ಅತ್ಯಂತ ವೈವಿಧ್ಯಮಯವಾದ ಜೀವನ ಧೋರಣೆಗಳಿಂದ ಶ್ರೀಮಂತಗೊಂಡದ್ದಾಗಿದೆ. ಕಾದಂಬರಿಯ ಕೇಂದ್ರ ಲಕ್ಷ್ಯವನ್ನು ಈ ಪರಿಸರವೇ ನಿಯಂತ್ರಿಸುತ್ತದೆ. ಈ ಪರಿಸರದ ಬೇರೆ ಬೇರೆ ಪದಗಳನ್ನು ಅವಲೋಕಿಸುವುದರ ಮೂಲಕ ಕೃಷ್ಣಪ್ಪನ ಹಾಗೂ ಕಾದಂಬರಿಯ ಪ್ರಮುಖ ಸೆಳೆತಗಳ ದರ್ಶನವಾಗಲು ಸಾಧ್ಯವಿದೆ.

ಈ ಕಾದಂಬರಿಯಲ್ಲಿ ಚರ್ಚಿಸಲ್ಪಡುವ ರಾಜಕೀಯ ಹಂದರದಲ್ಲಿ ಮುಖ್ಯವಾಗಿ ಮೂರು ಪದಗಳನ್ನು ಗುರುತಿಸಬಹುದು.

೧. ಬೈರಾಗಿ, ಮಹೇಶ್ವರಯ್ಯ ಮತ್ತು ಹನುಮನಾಯ್ಕ ಮುಂತಾದವರ ನಿಗೂಢತೆ, ನಿರ್ಲಿಪ್ತತೆ ಮತ್ತು ಅದಮ್ಯ ಜೀವನೋತ್ಸಾಹವನ್ನು ಪ್ರತಿನಿಧಿಸುವ ಪ್ರಪಂಚ.

೨. ಒಂದು ಸ್ಪಷ್ಟ ಉದ್ದೇಶಕ್ಕಾಗಿ ಜೀವನವನ್ನು ರೂಪಿಸಿಕೊಳ್ಳುವ ಒಂದು ರೀತಿಯಲ್ಲಿ ಮಿತಿಗೊಳಿಸಿಕೊಳ್ಳುವ ಅಣ್ಣಾಜಿ, ನಾಗರಾಜರ ಕ್ರಾಂತಿಕಾರಿ ರಾಜಕೀಯ.

೩. ಈ ಎರಡೂ ಪ್ರಪಂಚಗಳಲ್ಲೂ ಬೇರುಬಿಟ್ಟ ಕೃಷ್ಣಪ್ಪ, ಗೌರಿ ದೇಶಪಾಂಡೆಯವರ ಲಿಬರಲ್ ಪ್ರಪಂಚ.

ಯು.ಆರ್. ಅನಂತಮೂರ್ತಿಯವರ 'ಅವಸ್ಥೆ' ಅದು ಪ್ರಕಟವಾದಂದಿನಿಂದಲೂ ಒಂದಲ್ಲ ಒಂದು ರೀತಿಯಲ್ಲಿ ವಿವಾದಾತ್ಮಕ ಕಾದಂಬರಿಯಾಗಿಯೇ ಉಳಿದಿದೆ. ಕೃತಿಯನ್ನಾಧರಿಸಿದ ಚಲನಚಿತ್ರಕ್ಕೆ ಕೋರ್ಟಿನಿಂದ ತಡೆಯಾಜ್ಞೆ ಬಂದ ಮೇಲೆ ಅದೇ ಹೆಸರಿನ ಚಲನಚಿತ್ರ ಮತ್ತು ಕಾದಂಬರಿ ಇವೆರಡರ ಮಧ್ಯೆ ಇರುವ ಇರಬೇಕಾದ ವ್ಯತ್ಯಾಸವೇ ಮರೆತುಹೋಗಿ ಕೃತಿಯ ಮೌಲಿಕತೆಯನ್ನು ಓದುಗರು ಹಾಗೂ ವಿಮರ್ಶಕರು ಗುರುತಿಸುವಂತಹ ಸ್ಥಿತಿ ಬಂದಿದೆ.

ಯಶವಂತ ಚಿತ್ತಾಲರು 'ಅವಸ್ಥೆ'ಯ ಬಗ್ಗೆ 'ದಶವಾರ್ಷಿಕ ಸಾಹಿತ್ಯ ಸಮೀಕ್ಷೆ'ಯಲ್ಲಿ ಬರೆಯುತ್ತಾ "ಈ ಕೃತಿ ಅಸ್ತಿತ್ವವಾದದಿಂದ ಪ್ರಭಾವಿತವಾಗಿದೆಯೆಂದು" ವಾದಿಸುತ್ತಾರೆ. 'ಅವಸ್ಥೆ'ಯಲ್ಲಿ ಅನಂತಮೂರ್ತಿಯವರ ಪ್ರಮುಖ ಕಾಳಜಿ 'ವ್ಯಕ್ತಿ ಮತ್ತು ಸಮಾಜ' ಇಲ್ಲವೆ 'ಮಾನವ ವ್ಯಕ್ತಿ ಹಾಗೂ ಮಾನವೀಯ ಪರಿಸರ' ಇವುಗಳ ಸಂಬಂಧವನ್ನು ವ್ಯಕ್ತಿಯ ದೃಷ್ಟಿಕೋನದಿಂದ ಇವು ಅವನ ಪ್ರಜ್ಞೆಯಲ್ಲಿ ಮೂಡಿಬರುವ ರೀತಿಯ ನೆಲೆಯಿಂದ ಪರಿಶೀಲಿಸುವುದಾಗಿದೆ[೧] ಎಂಬ ಚಿತ್ತಾಲರ ಹೇಳಿಕೆ ಕೃತಿಯ

---

೧. ಯಶವಂತ ಚಿತ್ತಾಲರ 'ಕಾದಂಬರಿ' : (ದಶವಾರ್ಷಿಕ ಸಾಹಿತ್ಯ ಸಮಾಜ)
ಬೆಂಗಳೂರು ವಿ.ವಿ. ೧೯೮೨ – ಪುಟ – ೧೫-೧೭

ಒಂದು ಪಾರ್ಶ್ವವನ್ನು ಸಮರ್ಥವಾಗಿ ಗುರುತಿಸುತ್ತಾದರೂ ಅವಸ್ಥೆಯ ವೈಶಿಷ್ಟವನ್ನು ಅದಕ್ಕೂ ಮತ್ತು 'ಸಂಸ್ಕಾರ'ದಂತಹ ಕೃತಿಗೂ ಇರುವ ವ್ಯತ್ಯಾಸವನ್ನು ಇಲ್ಲವಾಗಿಸುತ್ತದೆ ಮತ್ತು ಕೃತಿಯ ರಾಜಕೀಯತೆಯನ್ನು ಅಲಕ್ಷಿಸುತ್ತದೆ.

ಶಿವರಾಮ ಕಾಡನಕುಪ್ಪೆಯವರ ಪ್ರತಿಕ್ರಿಯೆಯೂ "ಕೃತಿಕಾರ ಕೃತಿ ನಜಜೀವನದ ಸಂಬಂಧಗಳನ್ನು ಗೋಜು ಗೋಜಾಗಿಸುತ್ತದೆ".[೧] ಕಾಡನಕುಪ್ಪೆ ಹಾಗೂ ಮತ್ತೆ ಕೆಲವರ ಅಭಿಪ್ರಾಯದಲ್ಲಿ ಕೃತಿಯಲ್ಲಿಯ ಕೃಷ್ಣಪ್ಪಗೌಡನ ಪಾತ್ರ ನಿಜ ಜೀವನದಲ್ಲಿಯ ಶಾಂತವೇರಿ ಗೋಪಾಲಗೌಡರ ವ್ಯಕ್ತಿತ್ವವನ್ನವಲಂಭಿಸಿದೆ ಮತ್ತು ಆ ಕಾರಣದಿಂದ ಕೃತಿಯಲ್ಲಿ ಕೃಷ್ಣಪ್ಪಗೌಡ ವಿಷಯ ಲಂಪಟನಂತೆ ತೋರಿಸುವುದರಿಂದ ಗೋಪಾಲಗೌಡರ ವ್ಯಕ್ತಿತ್ವಕ್ಕೆ ಮಸಿ ಬಳಿದಂತಾಗಿದೆ. ಕೃಷ್ಣಪ್ಪ = ಗೋಪಾಲಗೌಡ ಎಂದು ಮೂಡುವ ಸಮೀಕರಣಕ್ಕೆ ಸಾಕ್ಷ್ಯವೇನೆಂದರೆ, ಕೃತಿಕಾರರಾದ ಅನಂತಮೂರ್ತಿಯವರೇ ಯಾವಾಗಲೋ ಒಂದು ಸಲ ಹಾಗೆ ಹೇಳಿದುದು ಕೃತಿ ನಮ್ಮ ಮುಂದಿರುವಾಗ ನಾವು ಕೃತಿಗಾರರ ಹೇಳಿಕೆಗಳಿಗೆ ಯಾಕೆ ಮಹತ್ವ ಕೊಡಬೇಕು.

ಪೋಲಂಕಿಯವರು ಕೃತಿಯನ್ನು ನೋಡುವುದೇ ಎಲ್ಲರಿಗಿಂತ ಭಿನ್ನವಾದ ದೃಷ್ಟಿಯಲ್ಲಿ ಅನಂತಮೂರ್ತಿಯವರು ಸ್ತ್ರೀ ಪುರುಷ ಸಂಬಂಧಗಳನ್ನು ಚಿತ್ರಿಸುವುದರಲ್ಲಿ ಪುರುಷನ ಪುರುಷತ್ವವನ್ನು ಅಗಣ್ಯವಾಗಿಸುತ್ತಾರೆಂದು ಪೋಲಂಕಿಯವರು ಆರಂಭಿಸಿ, ಅಲ್ಲಿಂದ ಮೂರ್ತಿಯವರ ದರ್ಶನ ಅವರ ಎಲ್ಲಾ ಕೃತಿಗಳಲ್ಲಿಯೂ ಜೀವನ ವಿಮುಖವಾಗಿದೆಯೆಂದು ಆ ಕಾರಣದಿಂದ ಅವರು "ಅತ್ಯಂತ ಮಾರಕವಾದ ಗುಹ್ಯ ರೋಗಗಳಂತೆ ಕ್ಷಯ ಕ್ಯಾನ್ಸರುಗಳಂತೆ ಮೃತ್ಯು ಭಯಂಕರರು"[೨] ಎಂಬ ಭಯಂಕರ ತೀರ್ಮಾನಕ್ಕೆ ಬರುತ್ತಾರೆ.

ಇಲ್ಲಿಯ ತನಕ ಮಾಡಿದ ವಿಮರ್ಶೆಗಳ ಸ್ಥೂಲ ವಿಶ್ಲೇಷಣೆಯ ಉದ್ದೇಶ ಕೇವಲ ಎರಡು ವಿಚಾರಗಳನ್ನು ಮಂಡಿಸಲು ಮಾತ್ರ: ಯಾವುದೇ ಒಂದು ವಿಧದ ಸಾಹಿತ್ಯ ವಿಮರ್ಶೆಯಲ್ಲಿ ಕೃತಿಕಾರನನ್ನು ಕುರಿತಾದ ವಿಚಾರಗಳನ್ನು ತಂದರೆ ಕೃತಿಗೆ ಹೇಗೆ ಅಪಚಾರವಾಗುತ್ತದೆಂದು ತೋರಿಸಲು ಮತ್ತು ಎರಡು 'ಅವಸ್ಥೆ'ಯನ್ನು ಒಂದು ಗಂಭೀರ ರಾಜಕೀಯ ಕಾದಂಬರಿಯೆಂದು ಪರಿಗಣಿಸಿ ಅದರ ವಿಶ್ಲೇಷಣೆಯನ್ನು ಆ ವೈಚಾರಿಕೆ ಚೌಕಟ್ಟಿನಲ್ಲಿ ಮಾಡಿದರೆ ಕೃತಿಯ ಮೌಲ್ಯ ಮತ್ತು ಅರ್ಥವಂತಿಕೆ ಹೆಚ್ಚು ಶ್ರೀಮಂತವಾಗುತ್ತದೆಂದು ತೋರಿಸಲು ಕೃತಿಯ ವಿಶ್ಲೇಷಣೆಯನ್ನು ಹೀಗೆ ಮಾಡಬಹುದು.

---

೧. ಶಿವರಾಮ ಕಾಡನಕುಪ್ಪೆ : ಚಂಪಾ : ಸಂಪಾದಕೀಯ – ಒಂದು ಪ್ರಕ್ರಿಯೆ ಸಂಕ್ರಮಣ (೧೯೭೪) – ಪುಟ – ೧೫–೧೬
೨. ರಾಮಮೂರ್ತಿ ಪೋಲಂಕಿ, ಸಂಕ್ರಮಣ (೧೯೭೪) ಪುಟ – ೧೨–೧೩

೧. ಪ್ರಕ್ಷುಬ್ಧ ಸ್ವಪ್ನ ಜಗತ್ತಿನ ವಾತಾವರಣ

೨. ಇಂತಹ ಲೋಕದಲ್ಲಿ ಕಂಡುಬರುವ ಗೋಜುಗೋಜಲು ಮಾನವ ಸಂಬಂಧಗಳು

೩. ಈ ವಿಧದ ಗೋಜಲು ಸಂಬಂಧಗಳು ಮಂಡಿಸುವ ರಾಜಕೀಯ ವಿಚಾರಗಳು

ರಾಜಕೀಯ ಕಾದಂಬರಿಯ ನೆಲೆಯಲ್ಲಿ 'ಅವಸ್ಥೆ' ಎಲ್ಲಾ ರಾಜಕೀಯ ಪ್ರಣಾಲಿಗಳ ಆಳದಲ್ಲಿ ಹುದುಗಿರತಕ್ಕ ದುರಂತ ಸತ್ಯದ ಬಗ್ಗೆ ಹೀಗೆ ಹೇಳುತ್ತದೆ. ಒಂದು ವ್ಯವಸ್ಥೆಯನ್ನು ಒಪ್ಪಿಕೊಂಡು ಅದರೊಳಗಿಂದಲೇ ಅದನ್ನು ಬದಲಾಯಿಸಲು ಮಾಡುವ ಯತ್ನ ಅಲ್ಪಸ್ವಲ್ಪ ಯಶಸ್ವಿಯಾದರೂ ಕೊನೆಗೆ ವ್ಯವಸ್ಥೆಯನ್ನೇ ಮತ್ತೂ ಭದ್ರಪಡಿಸುತ್ತದೆ. ಇದಕ್ಕೆ ಬದಲಾಗಿ ಆಗಬಹುದಾದ ಅಲ್ಪಸ್ವಲ್ಪ ಬದಲಾವಣೆಯೂ – ವ್ಯವಸ್ಥೆಯನ್ನು ಒಪ್ಪಿಕೊಳ್ಳದೇ ಇರುವುದರಿಂದ – ಸಾಧ್ಯವಾಗುವುದಿಲ್ಲ. ಅಕಸ್ಮಾತ್ ಕಾಲದೇಶ ಕೂಡಿಬಂದು ಹೊರಗಿನಿಂದಾದ ಪ್ರಯತ್ನಕ್ಕೆ ಯಶಸ್ಸು ಸಿಕ್ಕಿ ಒಂದು ವ್ಯವಸ್ಥೆ ಬುಡಮೇಲಾಗಿ ಉರುಳಿದರೂ ಅವರ ಜಾಗದಲ್ಲಿ ಮತ್ತೊಂದು ಪರ್ಯಾಯ ವ್ಯವಸ್ಥೆ ಅಸ್ತಿತ್ವಕ್ಕೆ ಬರುತ್ತದೆ. ಹಾಗಿರುವಗ ವ್ಯವಸ್ಥೆಯಲ್ಲಿ ವ್ಯವಸ್ಥಾತೀತ ಸ್ಥಿತಿಯನ್ನು ತರುವುದು ಹೇಗೆ? ಅದು ಸಾಧ್ಯವಿದೆಯೇ?

ಈ ತಾತ್ವಿಕ ಹಿನ್ನೆಲೆಯಲ್ಲಿ ನಾವು ಕಾದಂಬರಿಯ ಪಾತ್ರಗಳನ್ನು ಘಟನೆಗಳನ್ನು ನೋಡಿದಾಗ ಅವುಗಳಲ್ಲಿ ಒಂದು ಅಪೂರ್ವ ವಿನ್ಯಾಸ ಕಾಣುತ್ತದೆ. (೧) ಇರುವ ವ್ಯವಸ್ಥೆಯನ್ನು ಬಲಪಡಿಸಿ ಅದರಿಂದ ಲಾಭ ಪಡೆಯುತ್ತಿರುವವರು. (ಮುಖ್ಯಮಂತ್ರಿ ವೀರಪ್ಪ, ಚೆನ್ನವೀರಯ್ಯ ಮುಂತಾದವರು); (೨) ವ್ಯವಸ್ಥೆಯನ್ನು ನಿರಾಕರಿಸಿ ಹೊರಗಿನಿಂದ ಅದನ್ನು ನಾಶಮಾಡಲು ಯತ್ನಿಸುತ್ತಿರುವವರು (ಅಣ್ಣಾಜಿ, ನಾಗರಾಜ, ಇತ್ಯಾದಿ): (೩) ವ್ಯವಸ್ಥೆಯನ್ನು ಒಪ್ಪಿಕೊಂಡು ಅದರೊಗಳಗಿಂದಲೇ ಅವನ್ನು ಉತ್ತಮಗೊಳಿಸಲು ಯತ್ನಿಸುತ್ತಿರುವವರು (ಕೃಷ್ಣಪ್ಪ, ಗೌರಿ ದೇಶಪಾಂಡೆ ಮತ್ತು ಗೋಪಾಲರೆಡ್ಡಿ) ಮತ್ತು (೪) ಕೊನೆಯದಾಗಿ ವ್ಯವಸ್ಥೆಗೂ ತಮಗೂ ಸಂಬಂಧವೇ ಇಲ್ಲದಂತೆ ಅದರಂಚಿನಲ್ಲಿರುವವರು (ಬೈರಾಗಿ, ಮಹೇಶ್ವರಯ್ಯ, ಹನುಮನಾಯ್ಕ, ಕೃಷ್ಣಪ್ಪನ ತಾಯಿ ಇತ್ಯಾದಿ). ವ್ಯವಸ್ಥೆಯೊಡನೆ ಇರುವ ಈ ಅನೇಕ ಸಮೀಕರಣಗಳಲ್ಲಿ ಕೃತಿ ಕೆಲವನ್ನು ಸಂಪೂರ್ಣ ನಿರಾಕರಿಸಿ, ಕೆಲವನ್ನು ಕೇವಲ ಆಶ್ಚರ್ಯದಿಂದ ಕಂಡರೆ ಮತ್ತೆ ಕೆಲವನ್ನು ಅಪರಿಹಾರ್ಯವಾಗಿ ಕೆಲವು ಶರತ್ತುಗಳೊಡನೆ ಒಪ್ಪಿಕೊಳ್ಳುತ್ತದೆ.

ಅವಸ್ಥೆಯ ವಸ್ತು ಮೂರು ಭಾಗಗಳಲ್ಲಿ ಸಂಘಟಿತವಾಗಿದೆ. ಮೊದಲನೆಯ ಭಾಗದಲ್ಲಿಯ ಘಟನೆಗಳು ಕತೆಯ ನಾಯಕ ಕೃಷ್ಣಪ್ಪ ಸೋದ್ದಿಶ್ಯವಾಗಿ ಶೋಧಿಸುವ ಜೀವನಕ್ರಮ – ಮೌಲ್ಯಗಳಿಗೆ

ಸಂಬಂಧಪಟ್ಟಂತೆ ಬರುತ್ತವೆ. ಅವಸ್ಥೆಯ ಕೃಷ್ಣಪ್ಪನೊಬ್ಬನೆ ಅವನ್ನು ಸ್ವೇಚ್ಛೆಯಿಂದ ಹುಡುಕುತ್ತಾನೆ ಎಂದೇ ಸಮಕಾಲೀನ ಸಾಂಸ್ಕೃತಿಕ ಸಂದರ್ಭ ಅನಂತಮೂರ್ತಿಯವರ ಕಾದಂಬರಿಯಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತದೆ.

ಕಾದಂಬರಿಯ ಮೊದಲ ಭಾಗದಲ್ಲಿ ಕೃಷ್ಣಪ್ಪನ ಜೀವನವನ್ನು ವಿವಿಧ ಮನೋಧರ್ಮ ಹೊಂದಿದ ನಾಲ್ವರು ಪ್ರಭಾವಿಸುತ್ತಾರೆ. ಅವನಲ್ಲಿ ಮೊದಲಿನಿಂದಲೂ ಸುಪ್ತವಾದ ಅಸಾಮಾನ್ಯತೆಯನ್ನು ಗುರುತಿಸುವವರು ಮಹೇಶ್ವರಯ್ಯ. ಆಗ ಕೃಷ್ಣಪ್ಪ ದನ ಕಾಯುವ ಕೆಲಸ ಮಾಡುತ್ತಿದ್ದ ಬಾಲಕ. "ಅಯ್ಯೋ ಪೆದ್ದು ಹುಡುಗ. ನೀನು ಯಾರೆಂದು ನಿನಗೆ ಇಷ್ಟು ದಿನವೂ ತಿಳಿಯದೆ ಹೋಯಿತೆ? ಬಾ ನನ್ನ ಹಿಂದೆ ಎಂದು ಜವಾಬ್ದಾರಿ ಹೊತ್ತವರು ಕೃಷ್ಣನನ್ನು ಅವನ ಪರಿಸರದಿಂದ ಮೇಲೆತ್ತಿ ಸುಶಿಕ್ಷಿತನನ್ನಾಗಿ ಮಾಡುತ್ತಾರೆ. "ನೀನು ಎಲ್ಲ ಕಷ್ಟ, ಎಲ್ಲ ಬವಣೆ ಪಟ್ಟು – – – – ನಿನ್ನ ಊರಲ್ಲೇ ಬೆಳೆಯಬೇಕು" ಎಂದು ಅವನಿಗೆ ದಾರಿ ತೋರುತ್ತಾರೆ. ರಸಿಕ, ವಿರಾಗಿ ಕಾಲಜ್ಞಾನಿ ಎಂದು ರಹಸ್ಯ ವ್ಯಕ್ತಿಯಾದ ಮಹೇಶ್ವರಯ್ಯನ ಬಗ್ಗೆ ಕೃಷ್ಣಪ್ಪನಲ್ಲಿ ಅದರ ವಿಶ್ವಾಸಗಳಿಗೆ ಕೊರತೆಯಿಲ್ಲವಾದರೂ ಆತ್ಮಾರಾಮನಾದ ಅವನ ಸಮಾಜ ವಿಮುಖತೆ ತನ್ನ ದಾರಿಯಲ್ಲಿ ಎಂದು ಕೃಷ್ಣಪ್ಪ ಬಹುಬೇಗ ಕಂಡುಕೊಳ್ಳುತ್ತಾರೆ. ಅವ್ಯಕ್ತದತ್ತ ತುಡಿಯುವ ಅವನ ಜೀವದ ಒಂದು ಅಂಶ ಶಕ್ತಿಯ ಉಪಾಸಕ ಮಹೇಶ್ವರಯ್ಯನಿಗೆ ಅಂಟಿಕೊಂಡರೂ ಮಹೇಶ್ವರಯ್ಯ ನಡೆಯಿಸುವ ಜಂಗಮ ಜೀವನಕ್ಕಿಂತ ಬೇರೆಯಾದ ಸಮಷ್ಟಿ ಜೀವನವನ್ನು ಕೃಷ್ಣಪ್ಪ ಬಯಸುತ್ತಾರೆ. ಕೃಷ್ಣಪ್ಪನನ್ನು ಪ್ರಭಾವಿಸುವ ಇನ್ನೊಂದು ವ್ಯಕ್ತಿ ಅಣ್ಣಾಜಿ. ಮಹೇಶ್ವರಯ್ಯನ ಜೀವನ ಕ್ರಮಕ್ಕೆ ತೀರ ವಿರುದ್ಧವಾದ ಜೀವನವನ್ನು ನಡೆಸುತ್ತಿರುವ ಅಣ್ಣಾಜಿ ಕ್ರಾಂತಿಯ ದ್ರಾಷ್ಟಾರ. "ನೀನು ಮ್ಯಾಸ್‌ಮನ್ ಆಗಬೇಕು. ವರ್ಗ ಆಗಬೇಕು. ವರ್ಗ ಹೋರಾಟದ ಮುಂಚೂಣಿಯಲ್ಲಿ ನಿನ್ನಂಥವರು ನಿಲ್ಲಬೇಕು. ಕಮ್ಯೂನಿಸ್ಟರನ್ನು ಮರೆತು ಬಿಡು. ಈ ನೆಲದ ಸಾರವನ್ನು ಹೀರಿದ ಈ ಕ್ಷುದ್ರ ಚರಿತ್ರೇನ್ನ ಹಾಗೇ ವೈಭವವನ್ನು ಅರ್ಥಮಾಡಿಕೊಂಡ ಒಂದು ಹೊಸ ಕ್ರಾಂತಿಕಾರಿ ಪಕ್ಷವನ್ನು ಈ ದೇಶ ಕಟ್ಟಬೇಕು." ಎನ್ನುವ ಆದರ್ಶವನ್ನು ಕೃಷ್ಣಪ್ಪನ ಮನಸ್ಸಿನಲ್ಲಿ ಅವನು ಕೆತ್ತುತ್ತಾನೆ. ದಿವ್ಯದ ಹಂಬಲದಿಂದ ದೈನಿಕವನ್ನು ಕಡೆಗಣಿಸುತ್ತಿದ್ದ ಕೃಷ್ಣಪ್ಪನಿಗೆ ಅಣ್ಣಾಜಿಯಿಂದ ಶಾಕ್ ಟ್ರೀಟ್‌ಮೆಂಟ್ ದೊರೆಯುತ್ತದೆ.

"ಮುಚ್ಚು ಬಾಯಿ ಗರ್ವದ ಮಾತಾಡಬೇಡ. ಜೀವನಕ್ಕಿಂತ ನೀನು ಶ್ರೇಷ್ಠ ಅಂತ ತಿಳಿಯೋಕೆ ನೀನು ಯಾರು? ದೇವರ? ಕ್ಷುದ್ರನಾದ ದೈನಿಕ, ಅಂತ ಗೋಳಿಡ್ತಿಯಲ್ಲ? ಅದನ್ನು ಬಿಟ್ಟು ಉಳಿದದ್ದೇನಿದೆ? ಸಮಾಧಿಯಲ್ಲೋ, ಭಕ್ತಿಯ ಪರವಶತೆಯಲ್ಲೋ ಎಲ್ಲಕ್ಕಿಂತ ಮೇಲೆ ಹೋಗ್ತೀನಿ ಅಂತ ತಿಳಿದಿರೋ ಹಿಂಜಿದ ಬುದ್ಧಿಯ ಇಡಿಯಟ್ಟರಂತೆ ಮಾತಾಡಬೇಡ".

ಚನ್ನವೀರಯ್ಯ, ಉಮೆ ಮೊದಲಾದವರೊಂದಿಗೆ ಅಣ್ಣಾಜಿ ನಡೆಯಿಸುವ ಅನೈತಿಕ ವ್ಯಾಪಾರಗಳನ್ನು ಕೃಷ್ಣಪ್ಪ ಒಪ್ಪಿಕೊಳ್ಳುವುದಿಲ್ಲವಾದರೂ ಬೌದ್ಧಿಕವಾಗಿ ಅಣ್ಣಾಜಿ ಅವರನ್ನು ತುಂಬ ಪ್ರಭಾವಿಸುತ್ತಾನೆ. ಮಹೇಶ್ವರಯ್ಯ ಅಣ್ಣಾಜಿ ಅವರಂತೆ ಆ ಪ್ರಮಾಣದಲ್ಲಲ್ಲದಿದ್ದರೂ – ಗಡ್ಡದ ಮೇಲಿನ ಗುಹೆಯಲ್ಲಿ ವಾಸಿಸುವ ಮುದುಕ ಬೈರಾಗಿಯೂ ಕೃಷ್ಣಪ್ಪ ತನ್ನ ಜೀವನದ ಉದ್ದೇಶವನ್ನು ಕಂಡುಕೊಳ್ಳುವುದರಲ್ಲಿ ನೆರವಾಗುತ್ತಾನೆ. "ಕಣ್ಣು, ಕಿವಿ, ಮೂಗು, ಚರ್ಮಗಳನ್ನು ಹೊರಗನ್ನು ಒಳಗೆ ಬಿಡುತ್ತಲೇ ಇರುತ್ತಲ್ಲವೆ? ಹೊರಗನ್ನೂ, ಒಳಗನ್ನೂ ಇನ್ನಷ್ಟು ಆಪ್ತವಾಗಿ ವಿಶ್ವಯೋನಿಗಳು ಬಿಗಿಯುತ್ತಲ್ಲವೆ? ಈ ಸತ್ವ ಬಿಟ್ಟು ಬೇರೇನನ್ನು ಈ ಗೋಸಾಯಿ ಕಂಡುಕೊಂಡಿದ್ದಾನೆ?" ಎಂದು ಅವನ ರಹಸ್ಯ ಭೇದಿಸಲು ಕೃಷ್ಣಪ್ಪ ಪ್ರಯತ್ನಿಸುತ್ತಾನೆ. ಬೈರಾಗಿಯಲ್ಲಿ ಸ್ವಯಂ ಪೂರ್ಣತೆಯನ್ನು ಪ್ರೇರೇಪಿಸಿ ಅಸೂಯೆ ಪಡುತ್ತಾನೆ. ಆದರೆ, ನಾಯಿ ಗುಹೆಯಲ್ಲಿ ಸರ್ಪದೊಂದಿಗೆ ಹೋರಾಡುವ ಸಂದರ್ಭದಲ್ಲಿ ಬೈರಾಗಿಯ ಸ್ವಯಂ ಪೂರ್ಣತೆಯ ಬಿರುಕುಗಳನ್ನು ಕಂಡು ಅವನಿಗೆ ಆ ಸ್ವಯಂ ಪೂರ್ಣತೆಯ ಬಗ್ಗೆ ಬಲವಾದ ಅನುಮಾನ ಉಂಟಾಗುತ್ತದೆ. ಆ ಬೈರಾಗಿಯಂತೆ ಪ್ರಯತ್ನ ಪೂರ್ವಕವಾಗಿ ಒಣಗುವುದು. ತನ್ನ ನಿರ್ಧಾರದಲ್ಲಿ ಎನ್ನುವ ನಿರ್ಧಾರಕ್ಕೆ ಅವನು ಬರುತ್ತಾನೆ.

ಈ ಮೂವರಿಗಿಂತ ತೀರ ಭಿನ್ನವಾದ ರೀತಿಯಲ್ಲಿ ಗೌರಿ ದೇಶಪಾಂಡೆ ಕೃಷ್ಣಪ್ಪನ ಉದ್ದೇಶಗಳು ಸ್ಪಷ್ಟವಾಗುವುದಕ್ಕೆ ಕಾರಣಳಾಗುತ್ತಾಳೆ. ಗೌರಿಯಲ್ಲಿ ಸಮಾನ ಧರ್ಮಿಯನ್ನು ಕಂಡರೂ ಕೃಷ್ಣಪ್ಪ ಅವಳೊಡನೆ ಇಡಿಯಾದ ಸಂಬಂಧವನ್ನು ಬೆಳೆಸಿಕೊಳ್ಳಲು ಶಕ್ತನಾಗುವುದಿಲ್ಲ. ಅವರಿಬ್ಬರ ಸಾಂಸ್ಕೃತಿಕ ಹಿನ್ನೆಲೆ ಮತ್ತು ಮನೋವೃತ್ತಿಗಳ ಅಂತರ ಇವುಗಳಿಂದಾಗಿ ಅವರ ದಾರಿಗಳು ಬೇರೆ ಬೇರೆಯಾಗುತ್ತವೆ.

ಈ ನಾಲ್ಕೂ ವ್ಯಕ್ತಿಗಳೂ ಅವನಗೆ ಬಂದಿಲ್ಲೊಂದು ರೀತಿಯಿಂದ ಆಪ್ತರಾದರೂ ಅವರಾರಲ್ಲಿಯೂ ಅವನು ಸಮಷ್ಟಿಯ ಜೀವನವನ್ನು ಕಾಣುವುದಿಲ್ಲ. "ಎಲ್ಲ ಸಾಧ್ಯತೆಗಳಿಗೂ ಚುರುಕಾಗಿ ಸ್ಪಂದಿಸುತ್ತ ಬದುಕಬೇಕು". ಎನ್ನುವ ಅವನ ಆದರ್ಶವನ್ನು ಅವರಾರೂ ಮುಟ್ಟುವುದಿಲ್ಲ. ಹೀಗಿದ್ದರೂ ಕೃಷ್ಣಪ್ಪನು ಆಯ್ದುಕೊಳ್ಳುವ ಉದ್ದೇಶ, ಜೀವನ ಕ್ರಮಗಳು ಅವನು ಜೀವಂತ ವ್ಯಕ್ತಿಗಳೊಡನೆ ಬೆಳೆಸಿಕೊಂಡು ಬರುವ ಸಂಬಂಧಗಳಿಂದ ಮತ್ತು ಸೋದಿಶ್ಯವಾಗಿ ನಡೆಸುವ ಹುಡುಕುವಿಕೆಯಿಂದ ರೂಪು-ಗೊಳ್ಳುತ್ತೆಯೆನ್ನುವುದು ಗಮನಿಸತಕ್ಕ ಅಂಶವಾಗಿದೆ. ಇದು ಅವನಗೆ ಅನಂತಮೂರ್ತಿಯವರ ಉಳಿದ ನಾಯಕರಿಗಿಲ್ಲದ ಸಾಂಕೇತಿಕ ಮಹತ್ವವನ್ನು ಕೊಡುತ್ತದೆ. ಸಮಕಾಲೀನ ಬದುಕಿನ ಸಂದರ್ಭದಲ್ಲಿ ಕೃಷ್ಣಪ್ಪ ತನ್ನ ಆದರ್ಶವನ್ನು ಗಳಿಸಿಕೊಳ್ಳುವುದರಿಂದ ಅದು ವಾಸ್ತವದೊಡನೆ ನಿಜವಾದ ಸಂಬಂಧಗಳನ್ನು ಹೊಂದುವುದರಲ್ಲಿ ಅವನಿಗೆ ಸಹಾಯಕಾರಿಯಾಗುತ್ತದೆ. ಈ ದೃಷ್ಟಿಯಿಂದ ಅವಸ್ಥೆಯಲ್ಲಿ ಆದರ್ಶ, ವಾಸ್ತವಗಳು ಎರಡು ಧ್ರುವಗಳಂತೆ ಒಂದರಿಂದೊಂದು ಪರಾಙ್ಮುಖವಾಗಿ ಕೆಲಸ ಮಾಡದೆ ಒಂದನ್ನೊಂದು ಪ್ರಭಾವಿಸಲು ಪ್ರಯತ್ನಿಸುತ್ತವೆ. ಇದು ಈ ಕಾದಂಬರಿಯ ವೈಶಿಷ್ಟ್ಯಗಳಲ್ಲೊಂದು.

ಸಮಕಾಲೀನ ಸಾಂಸ್ಕೃತಿಕ ಸಂದರ್ಭದ ಬಹು ಮಹತ್ವದ ಅಂಗವಾದ ಹಿಂಸೆಯನ್ನು ಚಿತ್ರಿಸುವಲ್ಲಿ ಅವಸ್ಥೆ ತನ್ನ ಇನ್ನೊಂದು ವೈಶಿಷ್ಟ್ಯವನ್ನು ಪ್ರಕಟಗೊಳಿಸುತ್ತದೆ. ಕಾದಂಬರಿಯ ಎರಡನೆಯ ಭಾಗ ಇಂಥ ಚಿತ್ರಗಳಿಂದ ತುಂಬಿದೆ. ಅಣ್ಣಾಜಿಯನ್ನು ಹುಡುಕಿಕೊಂಡು ಕೃಷ್ಣಪ್ಪ ವಾರಂಗಲ್ಲಿಗೆ ಹೋಗುವ ಕ್ರಿಯೆ ಅವನು ಹೊರ ಜಗತ್ತಿನೊಡನೆ ಹೊಂದಿದ ನೈಜ ಸಂಬಂಧಗಳ ಸಂಕೇತವಾಗಿ ಅರ್ಥವನ್ನು ಪಡೆಯುತ್ತದೆ. ಹಿಂಸೆಯ ಅನುಭವ ಕೃಷ್ಣಪ್ಪನಿಗೆ ಅವನು ವಾರಂಗಲ್ಲಿಗೆ ಹೋಗುವ ಮೊದಲೇ ಪರಿಚಿತವಾಗಿರುತ್ತದೆ. ಹಾಗೆ ನೋಡಿದರೆ ಅವನು ಬೆಳೆದದ್ದೆ ಹಿಂಸೆಯ ಛಾಯೆಯಲ್ಲಿ. ಕೃಷ್ಣಪ್ಪ ವಾರಂಗಲ್ ಪೋಲಿಸು ಠಾಣೆಯಲ್ಲಿ ಪಡೆಯುವ ನರಕದ ಅನುಭವ ಒಂದು ರೀತಿಯಿಂದ ಅವನ ಇಮಿಟೇಶನ್ ಇಲ್ಲಿ ನಡೆಯುವ ಘಟನೆಗಳ ಮೂಲಕ ಅವನ ಸತ್ವಪರೀಕ್ಷೆ ನಡೆಯುತ್ತದೆ. ಅಣ್ಣಾಜಿಯ ದಸ್ತಗಿರಿ ಮತ್ತು ಕೊಲೆ ಅಸಹಾಯ ಹೆಂಗಸಿನ ಮೇಲೆ ನಡೆಯುವ ಪಾಶವೀ ಬಲತ್ಕಾರ 'ಏರೋಪ್ಲೇನ್'ನ ಯಾತನೆ ಹೀಗೆ ಒಂದರ ಮೇಲೊಂದು ಅಘಾತ ಬಂದೊದಗಿದರೂ ಕೃಷ್ಣಪ್ಪ ತನ್ನ ನಿರ್ವಿಕಾರತೆಯನ್ನು ಕಳೆದುಕೊಳ್ಳುವುದಿಲ್ಲ. "ನಿರೀಕ್ಷೆಯಲ್ಲಿ ಅತ್ಯಂತ ಅಸಹನೀಯವೆನ್ನಿಸುವ ನೋವು ವರ್ತಮಾನದಲ್ಲಿ ಅನುಭವಿಸುವಾಗ ಅಷ್ಟು ಅಸಹನೀಯವಲ್ಲ" ಇದು ಹಿಂಸೆಯ ಸ್ವರೂಪದ ಬಗ್ಗೆ ಅವನು ಕಂಡುಕೊಳ್ಳುವ ಹೊಸ ಸಂಗತಿ. ಮನುಷ್ಯ ಸಹಜವಾದ ಭಯದಿಂದ ವಿಚಲಿತನಾದರೂ ಅವನನ್ನು ನಿಜವಾಗಿ ಕಾಡುವ ಪ್ರಶ್ನೆ ಒಂದೇ: "– – – ತಾನು ಕಂಡದ್ದಲ್ಲಿ ಇಲ್ಲಿ – ಈ ನೆಲದ ಧೂಳಿನಲ್ಲಿ ಈ ಸೆಟೆಯಲ್ಲಿ, ಈ ತಿಗಣೆಗಳಲ್ಲಿ, ಈ ಗಾಳಿಯಲ್ಲದ ಕತ್ತಲಲ್ಲಿ ಕೇಂದ್ರೀಕರಿಸಿದಂತೆ ಅನ್ನಿಸುತ್ತದೆ. ಇದನ್ನು ನಾನು ಗೆಲ್ಲಬಲ್ಲೆನೋ" ನರಕಯಾತ್ರೆ ನಾಯಕನ ಅನಿವಾರ್ಯ ಕ್ರಿಯೆಯಾಗಿ ಮಹಾಕಾವ್ಯಗಳಲ್ಲಿ ಬರುತ್ತದೆ.

ಇಂಥ ಒಂದು ಸಾಂಕೇತಿಕತೆಯನ್ನು ಕೃಷ್ಣಪ್ಪನ ವಾರಂಗಲ್ ಯಾತ್ರೆಯಲ್ಲಿ ನಾವು ಕಾಣಬಹುದು. ಯಾಕೆಂದರೆ, ವಾಸ್ತವದ ತಲಸ್ಪರ್ಶಿಯಾದ ಅನುಭವದಿಂದ ಆತ ಮತ್ತಷ್ಟು ಗಟ್ಟಿಯಾಗುತ್ತಾನೆ. ಅವನ ಆದರ್ಶಕ್ಕೆ ಮೊನಚು ಬರುತ್ತದೆ. ಹಳ್ಳಿಗೆ ಹೋಗಿ ನೆಲೆಸಿ ರೈತರ ಸಂಘಟನೆಯಲ್ಲಿ ತೊಡಗುತ್ತಾನೆ. ಇಲ್ಲಿಯೂ ಕೂಡ ವಾಸ್ತವ ಆದರ್ಶಗಳು ಒಂದನ್ನೊಂದು ಪ್ರಭಾವಿಸುವ ಪರಸ್ಪರ ಕ್ರಿಯೆ ನಡೆಯುತ್ತದೆ.

ಇರುವ ವ್ಯವಸ್ಥೆಯನ್ನು ಇರುವಂತೆಯೇ ಖುಷಿಯಿಂದ ಒಪ್ಪಿಕೊಳ್ಳುವ ಮತ್ತು ವ್ಯವಸ್ಥೆಯನ್ನು ಅದರ ಹೊರಗಿದ್ದು ಅದನ್ನು ಬುಡಮೇಲು ಮಾಡುವ ಸಮೀಕರಣಗಳನ್ನು ಕೃತಿ ಸಂಪೂರ್ಣವಾಗಿ ನಿರಾಕರಿಸುತ್ತವೆ. ಕ್ಯಾಪಿಟಲಿಸ್ಟ್ ಎಂದು ಕರೆಯಬಹುದಾದ ಮೊದಲನೆಯ ಸಮೀಕರಣವನ್ನು ಕೃತಿ ಅಲ್ಲಗಳೆಯುವುದಕ್ಕೆ ಕಾರಣ ಅದು ಹಿಂಸೆ, ಸತ್ತೆ ಮತ್ತು ಶೋಷಣೆಯನ್ನೊಳಗೊಂಡಿರುವುದರಿಂದ

ಕೃಷ್ಣಪ್ಪನು ವಾರಂಗಲ್ ಜೈಲಿನಲ್ಲಿ ಕಂಡ ಬಡಪಾಯಿ ಹೆಣ್ಣಿನ ಮೇಲೆ ಅತ್ಯಾಚಾರ ಮಾಡುವ ಮಾತುಮಾತಿಗೂ ಏರೋಪ್ಲೇನ್ ಹತ್ತಿಸುವ ಪೋಲಿಸ್ ಸಂಸ್ಥೆಯೇ ಗೋಪಾಲ ರೆಡ್ಡಿಯ ಸಂಗೀತ ಪ್ರೇಮಕ್ಕೆ ಮತ್ತು ಗೃಹಮಂತ್ರಿಯ ಕಾವ್ಯಾಸಕ್ತಿಗೆ ರಕ್ಷಣೆ ಕೊಡುವುದು. ವಾರಂಗಲ್‌ನಲ್ಲಿಯ ಚಿತ್ರಹಿಂಸೆಯಲ್ಲಿ ಕೃಷ್ಣಪ್ಪ ಕಾಣುವುದು 'ವ್ಯವಸ್ಥೆಯ' ಭಯಂಕರ ಬೆತ್ತಲೆಯ ರೂಪ ಅದು ಅಮಾನವೀಯವಾದ್ದರಿಂದ ಯಾವಾಗಲೂ ಅದನ್ನು – ಅಂದರೆ ವ್ಯವಸ್ಥೆಯನ್ನು ಸಂಪೂರ್ಣ ಒಪ್ಪಿಕೊಳ್ಳಲು ಸಾಧ್ಯವೇ ಇಲ್ಲ. ಕೃಷ್ಣಪ್ಪ ನಾಗೇಶನಗೆ ಹೇಳುವಂತೆ "ಸುತ್ತಮುತ್ತಲಿನ ಕ್ಷುದ್ರತೆ ದುಃಖ ಕಂಡಾಗ ಇವರ ವಿರುದ್ಧ ಹೋರಾಡೋದು ಅಗತ್ಯ ಅನ್ನೋದು ಮಾತ್ರ ನನಗೆ ಸ್ವಯಂಸಿದ್ದ".

ಕಾದಂಬರಿಯ ಕೊನೆಯ ಭಾಗದಲ್ಲಿ ನಡೆಯುವ ಕ್ರಿಯೆ ಹೆಚ್ಚಾಗಿ ಕೃಷ್ಣಪ್ಪನ ವರ್ತಮಾನಕ್ಕೆ ಸಂಬಂಧಪಟ್ಟದಾಗಿದೆ. ಆದರೂ, ಒಂದೆರಡು ಮಹತ್ವದ ಹಿನ್ನೋಟಗಳು ಇಲ್ಲಿವೆ. ಮೊದಲನೆಯದು. ಕೃಷ್ಣಪ್ಪ ವಾರಂಗಲ್ಲಿನಿಂದ ಹಿಂತಿರುಗಿದ ನಂತರ ಹುಲಿಯೂರಿನಲ್ಲಿ ನೆಲೆಸಿ ರೈತರನ್ನು ಶೋಷಣೆಯ ವಿರುದ್ಧ ಸಂಘಟಿಸಿದುದು. ಇದು ಅವನನ್ನು ಸಕ್ರಿಯ ರಾಜಕಾರಣಕ್ಕೆ ಎಳೆಯುತ್ತದೆ. ಇಲ್ಲಿಯ ವಿವರಗಳು ವಾಸ್ತವವಾಗಿದ್ದು ತೀರ ಸಂಯಮದಿಂದ ಅವು ಸಂಯೋಜಿತವಾಗಿವೆ. ಇನ್ನೊಂದು ಲೂಸಿನಾಳೊಡನೆ ಪಡೆದ ಅನುಭವ ಅವನ ವೈಯಕ್ತಿಕ ಜೀವನಕ್ಕೆ ಸಂಬಂಧಿಸಿದ್ದು.

ಇಂಥ ಒಂದೆರಡು ಹಿನ್ನೋಟಗಳನ್ನು ಬಿಟ್ಟರೆ ಇಲ್ಲಿ ಕೃಷ್ಣಪ್ಪನ ಸದ್ಯದ ವ್ಯವಸ್ಥೆಯ ಮೇಲೆ ಕಾದಂಬರಿಯ ಲಕ್ಷ್ಯ ಕೇಂದ್ರೀಕೃತವಾಗಿದೆ. ಪಾರ್ಶ್ವವಾಯುವಿನ ಅಘಾತದಿಂದ ಸಾವನ್ನೆದುರಿಸುತ್ತಿರುವ ಕೃಷ್ಣಪ್ಪ ತೀವ್ರತೆಯಲ್ಲಿ ಆತ್ಮ ವಿಮರ್ಶೆಗೆ ತೊಡಗುತ್ತಾನೆ. ಕಿಸಾನ್ ಚಳುವಳಿಯ ನಾಯಕನೆಂದು ತನಗಿರುವ ಪ್ರಸಿದ್ಧಿ, ಪಾರ್ಟಿಯಲ್ಲಿ ತನಗಿರುವ ಅನನ್ಯ ಗೌರವ, ಅಧಿಕಾರ, ಮುಖ್ಯಮಂತ್ರಿಯಾಗುವ ಸಂಧಿ – ಇವೆಲ್ಲಿ ಕೃಷ್ಣಪ್ಪನಿಗೆ ಒಂದು ಸ್ತರದಲ್ಲಿ ತೃಪ್ತಿಯನ್ನು ನೀಡುತ್ತೇವೆಯಾದರೂ ಒಳಗೆ ತಾನು ಇಡಿಯಾಗಿಲ್ಲ. ಎನ್ನುವುದನ್ನು ಅವನು ಚೆನ್ನಾಗಿ ಅರಿತಿದ್ದಾನೆ. "ತನ್ನಲ್ಲಿ ಬಿರುಕು. ಎಲ್ಲಿ ಹೇಗೆ ಕಾಣಿಸಿಕೊಂಡಿತು? ಸಾಯುವ ಮುಂಚೆ ಇದನ್ನು ತಿಳಿಯಬೇಕು" ಎಂದು ಆತ್ಮಶೋಧಕ್ಕೆ ಹೊರಟ ಕೃಷ್ಣಪ್ಪನಿಗೆ "ನಾನು ಮೆತ್ತಗಾಗ್ತ ಬಂದ್ದಿದೀನಿ. ಒಳಗಿನಿಂದ ಕೊಳೀತ ಇದೀನ" ಎಂಬ ಅರಿವು ಸ್ಟಾರ್ಟಿಂಗ್ ಪಾಯಿಂಟ್ ಆಗುತ್ತದೆ. ವೀರಣ್ಣನೊಡನೆ ಪ್ರಜ್ಞಾಪೂರ್ವಕವಾಗಿ ಮಾಡಿಕೊಳ್ಳುವ ಒಪ್ಪಂದಗಳು ನಾಗರಾಜನ ರಾಜಕೀಯ ವಿಚಾರಗಳನ್ನು ಎದುರಿಸಲು ಉಪಯೋಗಿಸುವ ಯುಕ್ತವಾದ ರಾಜಕೀಯ ಹೋರಾಟದ ಫಲಶ್ರುತಿಯ ಬಗ್ಗೆಯೆ. ಅವನಲ್ಲಿ ಹುಟ್ಟಿಕೊಂಡ ಅನುಮಾನಗಳು ಅವನ ದೇಹಕ್ಕೆ ಬಡಿದುಕೊಂಡ ಪಾರ್ಶ್ವವಾಯುವಿನಂತೆ ಅವನ ವ್ಯಕ್ತಿತ್ವದ ಒಂದು ಭಾಗವನ್ನು ನಿಷ್ಕ್ರಿಯಗೊಳಿಸುತ್ತದೆ. ಇದರಿಂದ ಉಂಟಾದ ಸಂದಿಗ್ಧದ ಪೂರ್ಣ

ಕಲ್ಪನೆ ಅವನಿಗಿದೆ. ಈ ವ್ಯವಸ್ಥೆಯನ್ನು ಬಳಸಿಕೊಂಡು ತಾನು ಮುಖ್ಯಮಂತ್ರಿಯಾಗಬೇಕೆಂಬ ಆಸೆ ನಿಜವಾದದ್ದೋ ಅಥವಾ ಇವನ್ನೆಲ್ಲ ತ್ಯಾಗಮಾಡಿ ಭ್ರಷ್ಟಾಚಾರದ ಸೆಲೆಗಳಿಂದ ದೂರವಿದ್ದು ಜನಹಿತವನ್ನೂ, ತನ್ನ ಒಳಗಿನ ಹಿತವನ್ನೂ ಸಾವಿನ ಎದುರಿನಲ್ಲಿ ಮತ್ತೊಮ್ಮೆ ಸಾಧಿಸಬೇಕೆಂಬ ಸೆಳೆತ ನಿಜವಾದದ್ದೋ?

ವೈಚಾರಿಕ ನೆಲೆಯಲ್ಲಿ ಅನಂತಮೂರ್ತಿಯವರು ಚಿತ್ರಿಸಿರುವಂತೆ ಕೃಷ್ಣಪ್ಪನ ಸೋಷಲಿಸ್ಟ್ ಮಾರ್ಗ ಅಷ್ಟು ಅನಿವಾರ್ಯವಾಗಿ ಸೋಲಬೇಕಾಗಿಲ್ಲವೆಂದು ಕೆಲ ಓದುಗರಿಗೆ ಅನಿಸಬಹುದು ಅಂದರೆ ಸೈದ್ಧಾಂತಿವಾಗಿ ಲೇಖಕರು "ನಿಹಿಲಿಸ್ಟ್" ಆಗಿದ್ದಾರೆಯೆ ಎಂದು ಸಹಜವಾಗಿಯೇ ತೋರಬಹುದು ಮತ್ತೆ ಕೆಲವರಿಗೆ ಕೃಷ್ಣಪ್ಪ ಹಾಗೂ ಅಣ್ಣಾಜಿ ಇವರ ಪಾತ್ರಗಳಿಗೆ ಬಿದ್ದಿರುವ ಒತ್ತಿನಿಂದ ಇತರ ಪಾತ್ರಗಳು – ಮುಖ್ಯವಾಗಿ ಕೃಷ್ಣಪ್ಪನ ಹೆಂಡತಿ ಮತ್ತು ಲೂಸಿನಾ ಮುಂತಾದ ಸ್ತ್ರೀ ಪಾತ್ರಗಳು – ಅನಗತ್ಯವಾಗಿ ಪೇಲವವಾಗಿವೆಯೆಂದೆನಿಸಬಹುದು. ಆದರೆ, ಕೃತಿ – ಅದು ಯಾವುದೇ ಆಗಿರಲಿ ನಮಗೆ ಮುಖ್ಯವಾಗುವುದು ಅದು ತನ್ನ ಶರೀರದಲ್ಲಿ ಒಳಗೊಳ್ಳುವ ಗಂಭೀರ ಚಿಂತನೆ ವಿಶ್ಲೇಷಣೆಗಳಿಂದ – ಅದು ಕೊನೆಗೆ ಕೊಡುವ ತೀರ್ಮಾನಗಳಿಂದ ಅಲ್ಲ. ಅಲ್ಲವೆ? ಈ ದೃಷ್ಟಿಯಿಂದ ಆಧುನಿಕ ಸಮಾಜ ರಚನೆಗಳನ್ನು ಹಾಗೂ ವ್ಯವಸ್ಥೆಗಳನ್ನು ಅತ್ಯಂತ ಕಾಳಜಿಯಿಂದ ನಿಷ್ಠುರವಾಗಿ ಶೋಧಿಸುವ ಪರೀಕ್ಷಿಸುವ ಕೆಲವೇ ಸಾಹಿತ್ಯ ಕೃತಿಗಳಲ್ಲಿ 'ಅವಸ್ಥೆ' ಮುಖ್ಯವಾದುದು.

**ಮತದಾನ :** ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ೨೦ ನೇ ಶತಮಾನವನ್ನು ಕಾದಂಬರಿ ಯುಗ ಎಂದು ಕರೆಯುತ್ತೇವೆ. ಈ ಯುಗದಲ್ಲಿ ಅನೇಕ ಕಾದಂಬರಿಕಾರರು ಮೌಲಿಕವಾದ ಕಾದಂಬರಿಯನ್ನು ಕೊಟ್ಟಿದ್ದಾರೆ. ಅಂತಹವರಲ್ಲಿ ಎಸ್.ಎಲ್. ಭೈರಪ್ಪನವರು ಒಬ್ಬರು. ಹಾಸನ ಜಿಲ್ಲೆಯ ಚನ್ನರಾಯಪಟ್ಟಣದ ಸಂತೇಶಿವರ ಗ್ರಾಮದಲ್ಲಿ ಲಿಂಗಣ್ಣಯ್ಯ ಮತ್ತು ಗೌರಮ್ಮ ದಂಪತಿಗಳಿಗೆ ಜುಲೈ ೨೬, ೧೯೩೪ ರಲ್ಲಿ ಜನಿಸಿದರು. ಇವರು ಪ್ರಾಥಮಿಕ ವಿದ್ಯಾಭ್ಯಾಸವನ್ನು ತಾವು ಹುಟ್ಟಿದ ಹಳ್ಳಿಯಲ್ಲೇ ಹಾಗೂ ಅವರ ಸುತ್ತಮುತ್ತಲ ಪ್ರದೇಶದಲ್ಲಿ ಸಾಗಿಸಿದರು. ೧೯೪೫ ರಲ್ಲಿ ತಾಯಿಯನ್ನು ಕಳೆದುಕೊಂಡ ಇವರು ಕಷ್ಟಪಟ್ಟು ವಿದ್ಯಾಭ್ಯಾಸವನ್ನು ಮುಂದುವರಿಸಿದರು. ವಿದ್ಯಾಭ್ಯಾಸ ಕಾಲದಲ್ಲಿ ಹಾಗೂ ಅನಂತರ ನಾನಾ ರಂಗಗಳಲ್ಲಿ ದುಡಿದಿದ್ದಾರೆ. ಹತ್ತಾರು ರೀತಿಗಳಲ್ಲಿ ಕಷ್ಟಪಟ್ಟು ಜೀವನಾನುಭವ ಗಳಿಸಿದ್ದಾರೆ. ಶುದ್ಧ ಮೌಲ್ಯಗಳ ದೃಷ್ಟಿಯಿಂದ ಗಾಂಧೀಜಿಯೊಬ್ಬರನ್ನೇ ಮಹೋನ್ನತ ನಾಯಕನೆಂದು ಪರಿಗಣಿಸಿರುವ ಭೈರಪ್ಪನವರು ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಹೆಂಡದ ಲಾರಿಗಳನ್ನು ತಡೆದು ಪೋಲಿಸ್ ಸ್ಟೇಷನ್ನಿಗೆ ಹೋದವರೂ, ಭಾಷಣಗಳನ್ನು ಮಾಡಿದವರೂ ಆಗಿದ್ದಾರೆ. ಅದೂ ತಮ್ಮ ೧೩ನೇ ವಯಸ್ಸಿನಲ್ಲಿ.

ಎಂ.ಎ. ವಿದ್ಯಾಭ್ಯಾಸದ ನಂತರ ಹುಬ್ಬಳ್ಳಿಯ ಕಾಡಸಿದ್ದೇಶ್ವರ ಕಾಲೇಜಿನಲ್ಲಿ ತರ್ಕಶಾಸ್ತ್ರ ಮತ್ತು ಮನಃಶಾಸ್ತ್ರ ಅಧ್ಯಾಪಕರಾಗಿ (೧೯೫೮ ರಿಂದ ೧೯೬೦) ಅನಂತರ ೧೯೬೦ ರಿಂದ ೧೯೬೬ ರವರೆಗೆ ಗುಜರಾತಿನ ಸರ್‌ದಾರ್ ಪಟೇಲ್ ವಿಶ್ವವಿದ್ಯಾನಿಲಯದಲ್ಲಿ ತರ್ಕಶಾಸ್ತ್ರ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದರು. ಎಸ್.ಎಲ್. ಭೈರಪ್ಪನವರ ಹೆಚ್ಚಿನ ಆಸಕ್ತಿ ಕ್ಷೇತ್ರವೆಂದರೆ, ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ, ಸಾಹಿತ್ಯ ಕ್ಷೇತ್ರವನ್ನು ಬಿಟ್ಟರೆ ಅವರಿಗೆ ಆಸಕ್ತಿ ಇರುವ ವಿಷಯಗಳೆಂದರೆ ತರ್ಕಶಾಸ್ತ್ರ, ಸಮಾಜ ಶಾಸ್ತ್ರ, ಮನಃಶಾಸ್ತ್ರ ನ್ಯಾಯ ಮೀಮಾಂಸೆ, ಸೌಂದರ್ಯ ಮೀಮಾಂಸೆ, ಇತಿಹಾಸ ರಾಜಕೀಯ ಘಟನೆಗಳು ಅರ್ಥಶಾಸ್ತ್ರ, ತತ್ವಗಳು ಮತ್ತು ಮಾನವ ಜೀವನ ಶಾಸ್ತ್ರ ಇತ್ಯಾದಿ. ಈ ಎಲ್ಲಾ ಶಾಸ್ತ್ರಗಳ ಅಧ್ಯಯನದ ಪ್ರಭಾವ ಅವರ ಕಾದಂಬರಿಗಳಲ್ಲಿ ಪರೋಕ್ಷವಾಗಿ ಪ್ರತಿಬಿಂಬಿತವಾಗಿರುವುದನ್ನು ಗಮನಿಸಬಹುದು.

ಇವರಿಗೆ ದೊರೆತ ಪ್ರಶಸ್ತಿಗಳು "ವಂಶ ವೃಕ್ಷ" ಕಾದಂಬರಿಗೆ ೧೯೬೬ ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳು ಲಭಿಸಿದೆ. "ಸಾಕ್ಷಿ" ಕಾದಂಬರಿಗೆ ಗ್ರಂಥಲೋಕ ಮಾಸಪತ್ರಿಕೆ ಸ್ಥಾಪಿಸಿರುವ ೧೯೮೮ ನೇ ಇಸವಿ ವರ್ಷದ ಲೇಖಕ ಪ್ರಶಸ್ತಿ ಸಿಕ್ಕಿದೆ. ೧೯೮೫ ರ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಮಾಸ್ತಿ ಪ್ರಶಸ್ತಿ, ಕಲ್ಕತೆಯ ಭಾರತೀಯ ಭಾಷಾ ಪರಿಷತ್ತಿನ ಪ್ರಶಸ್ತಿ, ೧೯೯೯ ರಲ್ಲಿ ಗೊರೂರು ಸಾಹಿತ್ಯ ಪ್ರಶಸ್ತಿ ಮತ್ತು ೨೦೦೪ ರಲ್ಲಿ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದ ಗೌರವ ಡಾ॥ ಪ್ರಶಸ್ತಿ ಲಭಿಸಿದೆ. ನಿರಂಜನ ಪ್ರಶಸ್ತಿಗಳು ಬಂದಿವೆ. ಅವರ ಕೃತಿಗಳಾದ ದಾಟು, ಗೃಹಭಂಗ, ವಂಶವೃಕ್ಷ, ಸಾಕ್ಷಿ, ಪರ್ವ ಮೊದಲಾದ ಕಾದಂಬರಿಗಳು ಓದುಗರ ಹಾಗೂ ವಿಮರ್ಶಕರ ದೃಷ್ಟಿಯಲ್ಲಿ ಮಹತ್ವದ ಸ್ಥಾನವನ್ನು ಪಡೆದಿವೆ. ಇವರ ಕಾದಂಬರಿಗಳಲ್ಲಿ "ವಂಶ ವೃಕ್ಷ", "ತಬ್ಬಲಿಯು ನೀನಾದೆ ಮಗನೆ" ಮತದಾನ ಕನ್ನಡ ಚಲನಚಿತ್ರಗಳಾಗಿ ಮೂಡಿ ಬಂದಿರುವುದು ಹೆಮ್ಮೆಯ ಸಂಗತಿ.

ಈ ಕಾದಂಬರಿಯ ಕರ್ತೃವಾದ ಎಸ್.ಎಲ್. ಬೈರಪ್ಪನವರ ಸಾಹಿತ್ಯ ಸೃಷ್ಟಿಯ ಕಾರ್ಯ ಅವರು ಹೈಸ್ಕೂಲಿನಲ್ಲಿದ್ದಾಗ ಹಾಸ್ಟೆಲ್ ಮ್ಯಾಗ್‌ಜೀನ್‌ಗೆ ಕೆಲವು ಕಥೆಗಳನ್ನು ಬರೆಯುವುದರಿಂದ ಪ್ರಾರಂಭವಾಯಿತು. ಬದುಕು ಅನುಭವಗಳ ಸಂಕೀರ್ಣತೆಯನ್ನು ಗ್ರಹಿಸಲು ಮತ್ತು ಸೃಜನಾತ್ಮಕವಾಗಿ ಅಭಿವ್ಯಕ್ತಪಡಿಸಲು ಸಾಹಿತ್ಯ ಪ್ರಕಾರಗಳೆಲ್ಲೆಲ್ಲಾ ಕಾದಂಬರಿ ಪ್ರಕಾರ ಅತ್ಯಂತ ಉಪಯುಕ್ತ ಮಾಧ್ಯಮ ಎಂದು ತಿಳಿದಿರುವ ಬೈರಪ್ಪನವರು "ಧರ್ಮಶ್ರೀ"ಯಿಂದ ಮೊದಲ್ಗೊಂಡು "ಆವರಣ"ವು ಸೇರಿದಂತೆ ಇಪ್ಪತ್ತೊಂದು ಕಾದಂಬರಿಗಳನ್ನು ಬರೆದಿದ್ದಾರೆ.

ಈ ನಿಟ್ಟಿನಲ್ಲಿ 'ಮತದಾನ' ಕಾದಂಬರಿಯ ಹೆಸರಿಸುವಂಥದ್ದು ರಾಜಕೀಯ ವಸ್ತುವನ್ನಿಟ್ಟುಕೊಂಡು ಬರೆದಿರುವ ಅನೇಕ ಕಾದಂಬರಿಗಳಲ್ಲಿ ಮತದಾನವೂ ಒಂದು. ಶಿವರಾಮಕಾರಂತರು ಬರೆದಿರುವ 'ಗೊಂಡಾರಣ್ಯ' ಕಾದಂಬರಿಯಲ್ಲಿ ರಾಜಕೀಯ ವಸ್ತುವಿದೆ. ಆದರೆ, ಇದೇ ಕಾದಂಬರಿ ವಿಡಂಬನ

ಶೈಲಿಯಲ್ಲಿವೆ. ಮತದಾನ ಕಾದಂಬರಿಯಲ್ಲಿ ವಿಡಂಬನೆಯೇನೂ ಇಲ್ಲ. ರಾಜಕೀಯದ ದುಷ್ಪರಿಣಾಮದ ವಸ್ತು ಸ್ಥಿತಿ ಬೇರೆ ಬೇರೆ ವಿವರಗಳಲ್ಲಿ ಮೂಡಿಬಂದಿದೆ.

ಸಾಹಿತ್ಯ ಕೇವಲ ಆನಂದ ಕೊಟ್ಟರೆ ಸಾಲದು. ರಸಾನಂದ ಅದರ ಮುಖ್ಯ ಕೆಲಸ ಬದುಕಿಗೆ ಪ್ರತ್ಯಕ್ಷವಲ್ಲವಾದರೂ ಪರೋಕ್ಷ ಪ್ರಯೋಜನ ಸಾಹಿತ್ಯದಿಂದ ಆಗಬೇಕು. ಮನುಷ್ಯನ ಸಮಾಜದಲ್ಲಿ ಬದುಕುವವನು ಸಮಾಜದ ಎಲ್ಲಾ ರೀತಿಯ ಎಲ್ಲಾ ಸಮಸ್ಯೆಗಳು ವ್ಯಕ್ತಿಯೊಬ್ಬನ ಸೀಮಿತ ಅನುಭವದಲ್ಲಿ ಬರುವುದು ಸಾಧ್ಯವಿಲ್ಲ. ಸಾಹಿತ್ಯ ಅದನ್ನು ತುಂಬಿಕೊಡುವ ಪ್ರಯತ್ನ ಮಾಡುತ್ತವೆ. ಈ ಮೂಲಕ ವ್ಯಕ್ತಿಯನ್ನು, ಓದುಗನನ್ನು ಆಲೋಚನೆಗೆ ಹಚ್ಚುತ್ತದೆ. ಯಾವ ಕೃತಿ ಮನಸ್ಸನ್ನು ರಂಜಿಸುವುದರಲ್ಲೇ ಉರಮಿಸುತ್ತದೋ ಅದು ಶ್ರೇಷ್ಠವಾಗುವುದಿಲ್ಲ. ಯಾವುದು ಬದುಕಿನ ಹಲವು ಮುಖಗಳನ್ನು ಕುರಿತು ಆಲೋಚಿಸುವಂತೆ ಮಾಡುತ್ತದೋ ಅದು ಶ್ರೇಷ್ಠವಾಗುತ್ತದೆ. ಡಾ॥ ಎಸ್.ಎಲ್. ಭೈರಪ್ಪನವರ ಕಾದಂಬರಿಯಾದ 'ಮತದಾನ' ಈ ಕೆಲಸವನ್ನು ಮಾಡುತ್ತದೆ.

ಮತದಾನದ ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾರೆ. ಈ ಕಾದಂಬರಿಯ ಕಥೆಯು ಇಡಿಯಾಗಿ ಅಥವಾ ಇದರಲ್ಲಿ ಇರುವ ಘಟನೆಗಳು ಬಿಡಿ ಬಿಡಿಯಾಗಿ ಸಮಕಾಲೀನ ಹಿಂದೂಸ್ತಾನದ ಯಾವ ಭಾಗದಲ್ಲಾದರೂ ನಡೆಯಬಹುದು. ಬಂಗಾಳ, ಉತ್ತರ ಪ್ರದೇಶ, ಕೇರಳ, ರಾಜಸ್ತಾನ ಮೊದಲಾಗಿ ಯಾವುದಾದರೊಂದು ಪ್ರಾಂತ್ಯದ ಒಂದು ಪ್ರದೇಶದ ಹಿನ್ನೆಲೆಯಲ್ಲಿ ಸ್ಥಳದ ವಾತಾವರಣಕ್ಕೆ ಹೊಂದುವ ಕೆಲವು ಬದಲಾವಣೆಗಳೊಡನೆ ಇದೇ ಕಾದಂಬರಿಯನ್ನು ಬರೆಯಬಹುದು."[೧]

ರಾಜಕಾರಣದ ಹತ್ತು ಕೆಲವು ಮುಖಗಳನ್ನೂ ಅವು ಸೃಷ್ಟಿಸುವ ಒಳಸುಳಿಗಳನ್ನೂ ರಾಜಕೀಯದ ಮಾರ್ಮಿಕ ವಿದ್ಯಮಾನಗಳನ್ನೂ ರಾಜಕಾರಣದ ಪ್ರವೃತ್ತಿಯು ವ್ಯಕ್ತಿಗತವಾಗಿ ಸಾರ್ವಜನಿಕವಾಗಿ ಉತ್ಪತ್ತಿ ಮಾಡುವ ಸಮಸ್ಯೆಗಳೂ ನೈತಿಕ ಅವನತಿಗೆ ಕಾರಣವಾಗುವ ಅಂಶಗಳು ಮುಂತಾದ ವಿಚಾರಗಳ ಬಗೆಗೆ ಲೇಖಕರು 'ಮತದಾನ' 'ದಾಟು' ಕಾದಂಬರಿಗಳಲ್ಲಿ ಅತ್ಯಂತ ವಿಸ್ತಾರವಾಗಿ ಶೋಧನೆ ನಡೆಸುತ್ತಾರೆ. ಪ್ರಾಮಾಣಿಕ, ಸೇವಾ ಮನೋಭಾವನೆಯ ಆದರ್ಶ ಹೊತ್ತ ವೈದ್ಯ ಶಿವಪ್ಪನು ರಾಜಕೀಯ ವ್ಯಕ್ತಿಗಳ ಕುತಂತ್ರಗಳಿಗೆ, ಸ್ವಾರ್ಥ ಸಾಧನೆಗೆ ಬಲಿಯಾಗಿ ಶೋಷಣೆಗೊಳಗಾಗುವ ಮತದಾನದ ಕಥಾ ವಸ್ತುವು ಅಂದಿಗೂ-ಇಂದಿಗೂ ಪ್ರಸ್ತುತ.

ಡಾ॥ ಶಿವಪ್ಪ ಒಬ್ಬ ಸಾಮಾನ್ಯ ವ್ಯಕ್ತಿ, ಒಬ್ಬ ಸಾಮಾನ್ಯ ವ್ಯಕ್ತಿಯನ್ನು ತಮ್ಮ ಕಾದಂಬರಿಗೆ ನಾಯಕನನ್ನಾಗಿ ಆರಿಸುವುದರಲ್ಲಿಯೇ ಭೈರಪ್ಪನವರ ಕಾದಂಬರಿಯ ಸ್ವರೂಪ ಬದಲಾದುದನ್ನು ಕಾಣುತ್ತೇವೆ.

---

೧. ಮತದಾನ – ಎಸ್.ಎಲ್. ಭೈರಪ್ಪ – ಮೊದಲನೆ ಆವೃತ್ತಿಯ ಮುನ್ನುಡಿ

ಹಿಂದಿನ ಕಾದಂಬರಿಗಳಿಗೆ ಶ್ರೋತ್ರಿಯವರಂತಹ ಭವ್ಯ ವ್ಯಕ್ತಿ ಡಾ॥ ಸದಾಶಿವರಾಯರಂತಹ ವಿದ್ವಾಂಸರು. ಆನಂದ ಸತ್ಯರಂತಹ ಬುದ್ಧ ಜೀವಿಗಳು ಸಂವೇದನೆ ಶೀಲರು ಕಥಾನಾಯಕರಾಗಿದ್ದರೆ ಎಂ.ಬಿ.ಬಿ.ಎಸ್. ಓದಿ ತನ್ನ ವೃತ್ತಿಯಿಂದ ನಾಲ್ಕು ಜನ ನಿಸ್ಸಹಾಯಕರಿಗೆ ಸಹಾಯವಾದರೆ ಸಾಕು. ತನ್ನ ವೃತ್ತಿ ಸಾರ್ಥಕವೆನ್ನುವ ಒಬ್ಬ ಸಾಮಾನ್ಯ ವೈದ್ಯ ಡಾ॥ ಶಿವಪ್ಪ ಮತದಾನ ಕಾದಂಬರಿಗೆ ನಾಯಕನಾಗಿದ್ದಾನೆ.

ನಿಜವಾದ ವ್ಯಕ್ತಿ ಸಂಸ್ಥೆಗಳನ್ನು ಅಥವಾ ಘಟನೆಗಳನ್ನು ಅನುಸರಿಸಿ ಬರೆಯುವುದು ವಾಸ್ತವತೆಯಾದರೆ ಮತದಾನ ಕಾದಂಬರಿಯು ಆ ಜಾತಿಗೆ ಸೇರಿದುದಲ್ಲ. ಇಂತಹ ಘಟನೆಗಳು ನಡೆಯುವುದು ಅಸಂಭವವೇನಲ್ಲ ಎಂದಾದರೆ ಇದು ನಮ್ಮ ಸಮಾಜದ ವಾಸ್ತವಿಕ ಚಿತ್ರಣವೇ ಎಂಬುದಾಗಿ ಈ ಕಾದಂಬರಿಯ ಮುನ್ನುಡಿಯಲ್ಲಿ ಭೈರಪ್ಪನವರು ಹೇಳಿದ್ದಾರೆ. ನೈಜತೆ ಬೇರೆ. ವಾಸ್ತವ ಬೇರೆ ಸಂಭವನೀಯತೆಯೂ ವಾಸ್ತವ ಮಾರ್ಗದ ಅಂಶವೇ ಹಾಗೇ ನೋಡಿದರೆ ಮತದಾನವು ಅಪ್ಪಟವಾಗಿ ವಾಸ್ತವ ಮಾರ್ಗದ ಕಾದಂಬರಿ.

ಆದರ್ಶ ಮಾರ್ಗದಲ್ಲಿ ವೈದ್ಯಕೀಯ ಸೇವೆ ಮಾಡುವುದು ಡಾ॥ ಶಿವಪ್ಪನ ಜೀವನಧ್ಯೇಯ. ಆತ ಸರಳವಾದ ಬದುಕಿಗೆ ಹೊಂದಿಕೊಂಡು ಅದರಿಂದ ಎಷ್ಟು ತನ್ನ ಪಾಲು ಇದೆಯೋ ಅದನ್ನು ಮಾತ್ರ ತೆಗೆದುಕೊಂಡು ತೃಪ್ತನಾಗುವ ಮನುಷ್ಯ. ಯಾವ ಮಹತ್ವಕಾಂಕ್ಷೆಯೂ ಅವನನ್ನು ಕಾಡಲಾರದು. ಆ ಬೆಳಕಿನಲ್ಲೇ ಕಂಡಂತೆ ಕಾದಂಬರಿಯೂ ಮಹತ್ವಾಕಾಂಕ್ಷಿಯದಲ್ಲ. ಅದರ ಕಥನ ನೇರವಾದುದು. ಸರಳ ರೇಖೆಯದು.

ಮತದಾನ ಕಾದಂಬರಿಯನ್ನು ಬರೆಯುವ ವೇಳೆಗೆ ಭೈರಪ್ಪನ ಕಾದಂಬರಿಯ ಸ್ವರೂಪ ಬದಲಾಗಿದೆ. ತಮ್ಮ ಹಿಂದಿನ ಕಾದಂಬರಿಗಳಲ್ಲಿ ಬಂದ ಧರ್ಮ. ಸಂಸ್ಕೃತಿ, ಸನಾತನ ಮೌಲ್ಯಗಳು. ಭವ್ಯ ಪಾತ್ರಗಳು, ತಾತ್ವಿಕ ಪ್ರತಿಪಾದನೆ, ಗಹನವಾದ ಚರ್ಚೆ ವಿದ್ವತ್ತು ಮುಂತಾದವುಗಳಿಂದ ಹೊರಬಂದು ನಮ್ಮ ಜನ ಸಾಮಾನ್ಯರ ನಡುವೆ ಭೈರಪ್ಪನವರೂ ತಾವೂ ಒಬ್ಬರಾಗಿ ನಿತ್ಯ ಜೀವನದ ಸಮಕಾಲೀನ ರಾಜಕೀಯ ಚಿತ್ರವನ್ನು ಚಿತ್ರಿಸುವುದರಲ್ಲಿ ಸಫಲರಾಗಿದ್ದಾರೆ.

ಯಾವುದೇ ಒಂದು ವಿಚಾರ. ತತ್ವ ಅಥವಾ ದೃಷ್ಟಿಕೋನ ಎಂಬುದು ಕಾದಂಬರಿಯ ಪಾತ್ರ, ವಸ್ತು ವಿಶೇಷಗಳನ್ನು ನಿಗ್ರಹಿಸುವ ಕಟ್ಟು ಆಗಿ ಅಲ್ಲ; ಅದು ಲೇಖಕನ ಅನುಭವ ಸ್ವೀಕರಣ, ನಿರೂಪಣಾ ವಿಧಾನಗಳಲ್ಲಿ ಅಂತರ್ಗತವಾದ ಮತ್ತು ಸ್ವೀಕೃತ ಅನುಭವವನ್ನು ವಿನ್ಯಾಸಗೊಳಿಸುವ ಸತ್ವವಾಗಿದೆ. ಇದು ಲೇಖಕನ ಅರಿವಿಗೆ ಬಾರದೆಯೂ ಅವರ ಸಂವೇದನೆಯ ಭಾಗವಾಗಿ ಇರುತ್ತದೆ. ಬಹುಶಃ ಈ

ದೃಷ್ಟಿಯನ್ನಿಟ್ಟುಕೊಂಡೇ ಸಾಹಿತ್ಯ ಕೃತಿಯನ್ನು ಬಾಹ್ಯ ಶಿಲ್ಪಿ ಮತ್ತು ಒಳವಿವರ ಅಥವಾ ಹೊರ ರಚನೆ ಮತ್ತು ಒಳರಚನೆಗಳೆಂದು ವಿಶ್ಲೇಷಿಸಿ ನೋಡುವ ಒಂದು ಕ್ರಮ ಬೆಳೆದು ಬಂದಿದೆ. ಪದದ ವಾಚ್ಯ ವ್ಯಂಗ್ಯ ಧ್ವನಿಗಳಂತೆ!

ಕಾದಂಬರಿಯ ನಾಯಕ ಶಿವಪ್ಪ ಎಂ.ಬಿ.ಬಿ.ಎಸ್. ವೈದ್ಯ. ಕಾಸು ತೆಗೆದುಕೊಳ್ಳದೆ ರೋಗಿಗಳಿಗೆ ಚಿಕಿತ್ಸೆ ಮಾಡಬೇಕು ಎನ್ನುವ ಆದರ್ಶ ಹೊತ್ತು ಆ ದಿಶೆಯಲ್ಲಿ ಹೋಗುತ್ತಿದ್ದಾತ. ಗಾಂಧೀ ಯುಗದ ಆದರ್ಶವನ್ನು ಈತನಲ್ಲಿ ನಾವು ಕಾಣಬಹುದು. ಈತನಗೆ ಹೆಣ್ಣು ಕೊಡಲು ಯತ್ನಿಸುವವರು ಎರಡು ಬಲಾಢ್ಯ ಕೊಳಗಳು. ಒಬ್ಬರು ಹಿಂದೆ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದು ಈಗ ಜನತಾ ಸೇವಕ ಪಕ್ಷದ ಬೋರ್ಡು ಹಾಕಿದ್ದ ಸಂದರವಳ್ಳಿಯವರು, ಇನ್ನೊಬ್ಬರು ಸಚಿವ ನಾಗರವಳ್ಳಿ ಸ್ನೇಹ ಬೆಂಬಲ ಸಂಪಾದಿಸಿದ್ದ ಕಂಟ್ರಾಕ್ಟರ್ ಶಿವಗೆರೆ ರಾಮಲಿಂಗೇಗೌಡರು ಈ ಇಬ್ಬರೂ ಆತನಿಗೆ ಹೆಣ್ಣು ಕೊಡಲು ಮುಂದಾಗುವುದು ಆತನ ಆದರ್ಶಕ್ಕೆ ಮೆಚ್ಚಿ ಅಲ್ಲ. ತಮ್ಮ ಆಢ್ಯತನವನ್ನು ಮರೆಯಲಿಕ್ಕೆ! ಸಾದರವಳ್ಳಿಯವರು ತುಮಕೂರಿನಲ್ಲಿ ದೊಡ್ಡ ಆಸ್ಪತ್ರೆ ತೆರೆಯಲು ಅನುಕೂಲ ಮಾಡುವುದಾಗಿ ಹೇಳಿದರೆ; ರಾಮಲಿಂಗೇಗೌಡರು ಮಂತ್ರಿಗಳ ಪ್ರಭಾವದಿಂದ ಶಿವಪ್ಪನನ್ನು ಇಂಗ್ಲೆಂಡಿಗೆ ಕಳಿಸಲು ಯೋಚಿಸುತ್ತಿದ್ದರು.

ರೋಗಿಗಳಿಗೆ ಸೇವೆ ಮಾಡಬೇಕು ಎನ್ನುವ ಶಿವಪ್ಪನ ಹಂಬಲ ಇಬ್ಬರ ದೃಷ್ಟಿಯಲ್ಲಿ ಕೇವಲ ಹುಚ್ಚುತನ ಮಾತ್ರ; ಇದು ರಾಜಕಾರಣಿಗಳು ಯೋಚಿಸುವ ಧಾಟಿ ! !

ರಾಜಕಾರಣಿಯಾದವನು ಸದಾ ತನ್ನ ಸ್ವಂತ ಲಾಭದ ಹಿತದೃಷ್ಟಿ ಇಟ್ಟುಕೊಂಡೇ ಪ್ರತಿಯೊಂದು ಕೆಲಸಕ್ಕೂ ತನ್ನ ಪ್ರತಿಕ್ರಿಯೆ ವ್ಯಕ್ತಪಡಿಸುತ್ತಾನಾಗಲೀ ಆದರಿಂದ ಬೇರೆಯವರಿಗೆ ಆಗುವ ಪ್ರಯೋಜನದ ಬಗ್ಗೆ ಆತನಿಗೆ ನಿಕೃಷ್ಟ ಭಾವನೆ ಇರುತ್ತದೆ. ಸಾದರವಳ್ಳಿಯವರ ಮಗ ಪ್ರಕಾಶ್ ಕುಮಾರನಗೆ ತಮ್ಮ ಮಗಳನ್ನಿತ್ತು ನೆಂಟಸ್ಥಿಕೆ ಮಾಡಲು ರಾಮಲಿಂಗೇಗೌಡರು ನಿಶ್ಚಯಿಸಿದಾಗ ಆ ನೆಂಟಸ್ತಿಕೆ ಆಗದಂತೆ ಸಚಿವ ನಾಗರವಳ್ಳಿಯವರು ತಡೆಯುತ್ತಾರೆ. ತಮ್ಮ ಬೆಂಬಲಿಗ ರಾಮಲಿಂಗೇಗೌಡ ಸಾದರವಳ್ಳಿಯವರೊಡನೆ ನೆಂಟಸ್ತಿಕೆ ಮಾಡಿದರೆ ಮುಂದಿನ ಚುನಾವಣೆಯಲ್ಲಿ ರಮಲಿಂಗೇಗೌಡನ ಬೆಂಬಲ ತಮಗೆ ತಪ್ಪಿ ಸಾದರವಳ್ಳಿಯವರಿಗೆ ಸಿಗುತ್ತದೆ ಎಂದು ದುರಾಲೋಚಿಸಿಯೇ ಸಾದರವಳ್ಳಿಯವರ ಸಂಬಂಧ ನಮಗೆ ಇಷ್ಟವಿಲ್ಲ. ಇದರ ಮೇಲೆ ನಿಮ್ಮ ಇರಾದೆ ಎಂದು ನೆಂಟಸ್ತಿಕೆಯನ್ನು ತಡೆಯುತ್ತಾರೆ.

ಮುಂದೆ ಇದೇ ನಾಗರವಳ್ಳಿಯವರು ಚುನಾವಣೆಯಲ್ಲಿ ಪ್ರಕಾಶ್ ಕುಮಾರನಿಗೆ ಸೋತಾಗ: ಅವರ ಚುನಾವಣಾ ವೆಚ್ಚಕ್ಕೆ ಜಮೀನು ಅಡವಿಟ್ಟು ಕೊಟ್ಟ ಹಣವನ್ನು ತನಗೆ ಕಷ್ಟ ಸಂದರ್ಭ ಬಂದದ್ದರಿಂದ ಕೇಳಲು ರಾಮಲಿಂಗೇಗೌಡರು ಬಂದಾಗ ಮನೆಯಲ್ಲಿ ಇದ್ದು ಸಹ 'ಇಲ್ಲ ಅವರು' ಎಂದು ಹೇಳಿಸಿಕೊಳ್ಳುತ್ತಾರೆ. ತನ್ಮೂಲಕ ರಾಮಲಿಂಗೇಗೌಡರು ಕೆರೆಯಲ್ಲಿ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳಲು ಕಾರಣರಾಗುತ್ತಾರೆ !

ತನ್ನ ಪಾಡಿಗೆ ತಾನು ವೈದ್ಯಕೀಯ ಸೇವೆಯನ್ನು ಮಾಡಿಕೊಂಡಿರುವುದಕ್ಕೆ ಸುತ್ತಲಿನ ರಾಜಕೀಯವು ಅವನನ್ನು ಬಿಡುವುದಿಲ್ಲ. ರಾಜಕೀಯವು ಹಳ್ಳಿ ಊರುಗಳ ಕೇರಿಕೇರಿಗೂ ವ್ಯಾಪಿಸಿ ಸಾಮಾನ್ಯ ಬದುಕನ್ನೂ ಅಲ್ಲೋಲಗೊಳಿಸುವ ಶಕ್ತಿಯನ್ನು ಹೊಂದಿದೆ. ಮೊದಲಿಗೆ ಎರಡು ಪ್ರತಿಪಕ್ಷಗಳು ಕುಟುಂಬಗಳು ತಂತಮ್ಮ 'ಹೆಗಲ' ಕೊಟ್ಟು ಮದುವೆ ಮಾಡುವ ಮೂಲಕ ಅವನ ಜನಪ್ರಿಯತೆಯನ್ನು ಬಂಡವಾಳ ಮಾಡಿಕೊಂಡು ಸಾರ್ವತ್ರಿಕ ಚುನಾವಣೆಗೆ ಅವನು ನಿಲ್ಲುವಂತೆ ಪ್ರಚೋದಿಸುತ್ತದೆ. ಸುತರಾಂ ಒಪ್ಪದಿದ್ದ ಶಿವಪ್ಪ ಕಡೆಗೂ ಒಪ್ಪಿ ನಿಲ್ಲುತ್ತಾನೆ. ವಿರೋಧ ಪಕ್ಷದ ಮತಗಳು ಹಂಚಿಹೋಗಲು ಕೈಗೊಂಡ ರಾಜಕೀಯ ಕುತಂತ್ರ ಇದು ಎಂದು ಅವನು ಅರಿಯಲು ನೆರವಾಗುವ ಘಟನೆಗಳೇ ಕಾದಂಬರಿಯ ಹೂರಣ.

ರಾಜಕಾರಣದಲ್ಲಿ ಪ್ರಸಂಗಗಳು ಮೇಲುನೋಟಕ್ಕೆ ಕಾಣಿಸುವಷ್ಟು ಸರಳ ಇರುವುದಿಲ್ಲ. ಯಾರಿಗೆ ಸಹಾಯ ಮಾಡಿದರೂ, ಕಾಣುವ ಒಂದು ಮುಖ ಇದ್ದರೆ ಕಾಣದ ಇನ್ನೊಂದು ಮುಖವೂ ಇರುತ್ತದೆ. ಸ್ನೇಹದ ಮಾತುಗಳನ್ನಾಡುತ್ತಲೇ ವಂಚನೆಯ 'ಬಲೆ' ನೇಯುತ್ತಾರೆ. ಇದಕ್ಕೆ ಡಾ॥ ಶಿವಪ್ಪನ ವೃತ್ತಾಂತವನ್ನು ನೋಡಬಹುದು.

ರಾಜಕಾರಣದಲ್ಲಿ ಪ್ರಾಮಾಣಿಕತೆ, ವಿಶ್ವಾಸ, ನಿಸ್ವಾರ್ಥ ಮುಂತಾದ ಮಾತುಗಳಿಗೆ ಅರ್ಥವೇ ಇರುವುದಿಲ್ಲ. ಆದರ್ಶ, ಧ್ಯೇಯಗಳನ್ನು ಕಣ್ಣೆದುರೇ ಕೈಬಿಡಬೇಕಾಗಿ ಬರುತ್ತದೆ. ಸೇವೆ ಮಾಡುವ ಹಂಬಲವಿದ್ದರೂ ಅಸಹಾಯಕರಾಗಬೇಕಾಗುತ್ತದೆ. ಡಾ॥ ಶಿವಪ್ಪ ಚುನಾವಣೆಗೆ ನಿಂತ ಮೇಲೆ ಇಂಥ ಪರಿಸ್ಥಿತಿಗಳಿಗೆ ತುತ್ತಾಗುತ್ತಾನೆ. ಇಡತ ಎಂಬ ಹಳ್ಳಿಯಲ್ಲಿ ಎರಡು ಪಂಗಡಗಳಲ್ಲಿ ಹೊಡೆದಾಟವಾಗಿ ಗಾಯಗೊಂಡಿದ್ದ ಮಂತ್ರಿಗಳ ಕಡೆಯವರಿಗೆ ಚಿಕಿತ್ಸೆ ಮಾಡಲು ಹೋದಾಗ ಚಿಕಿತ್ಸೆ ಮಾಡಕೂಡದೆಂದು ಶಿವಪ್ಪನವರ ಕಡೆಯ ರೈತರು ಹಟ ಹಿಡಿಯುತ್ತಾರೆ. ತಮ್ಮ ಮಾತು ಮೀರಿದರೆ ಆ ಊರಿನಲ್ಲಿ ಒಂದು ಓಟೂ ಅವನಿಗೆ ಬರುವುದಿಲ್ಲ ಎಂದು ಹೇಳುತ್ತಾರೆ. ಈ ಸಂದರ್ಭದಲ್ಲಿ ಇದುವರೆಗೂ ಪಾಲಿಸಿಕೊಂಡು ಬಂದಿದ್ದ ವೈದ್ಯ ಧರ್ಮಕ್ಕೆ ವಿರೋಧವನ್ನು ತಾಳಿ ಶಿವಪ್ಪ ಚಿಕಿತ್ಸೆ ಮಾಡದೆ ಹೋಗುವ ನಿರ್ಧಾರ ಮಾಡುತ್ತಾನೆ.

ಕಾಂಗ್ರೆಸ್ ಅಭ್ಯರ್ಥಿ ಮಂತ್ರಿ ಅಪ್ಪಾಜಿಯವರ ವಿರುದ್ಧವಾಗಿ ಡಾ॥ ಶಿವಪ್ಪ ಅಭ್ಯರ್ಥಿಯಾದಾಗ ಮಂತ್ರಿ ಅಪ್ಪಾಜಿಯವರ ಚುನಾವಣೆಯ ಹೊಗೆ ಹೊತ್ತ ಕಂಟ್ರಾಕ್ಟರ್ ರಾಮಲಿಂಗಗೌಡ ಅವರ ನೆಂಟರು ಆದ ಡಾ॥ ಶಿವಪ್ಪನ ಅಕ್ಕ ಪುಟ್ಟಕ್ಕನನ್ನು ಡಾ॥ ಶಿವಪ್ಪನ ಮನವೊಲಿಸಿ ತನ್ನ ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳಲು ಪ್ರಯತ್ನಿಸುತ್ತಾರೆ. ಶಿವಪ್ಪನ ಅಕ್ಕ ಪುಟ್ಟಕ್ಕ "ನಿಂಗೆ ಕರ್ಚಾಗಿರೋ ದುಡ್ಡು ನಾವು ಕೊಡ್ತೀವಿ ಅಂತ ರಾಮಲಿಂಗಪ್ಪನೋರು ನಮ್ಮ ಜತೆ ಬಂದವ್ರಲ್ಲ ಕರಿಗೌಡ್ರು ಅವ್ರ ಕೈಲಿ ಐದು ಸಾವ್ರ ಕಳ್ಸಿಯವ್ರೆ. ಅದು ಸಾಲಾಕಿಲ್ಲ ಅಂತ ನೀನು ಹಟ ಮಾಡಿದ್ರೆ ಮತ್ತೆ ಐದು ಸಾವ್ರ ಕೊಡೊಕೂ ಅವ್ರು ಒಲ್ಲೆ ಅನ್ನಾಕಿಲ್ಲ. ಹೆಂಗೂ ಹತ್ತು ಸಾವ್ರ ಕೈಗೆ ಬತ್ತದೆ, ಗುಂಜ್‌ಕಂಡು ಸುಮ್ನಾಗು. ಈ ಎಲೆಕ್ಷನ್ ನಮ್ಮಂತೋರ್ಗೆ ಯಾಕೆ?".[೧]

ಇದು ಆಳುವ ಪಕ್ಷದವರ ಚುನಾವಣಾ ತಂತ್ರ. ಈ ರಾಜಕೀಯ ತಂತ್ರ ಶಿವಪ್ಪನಿಗೆ ವೈಯಕ್ತಿಕ ಸಮಸ್ಯೆಯಾಗಿ ನಿಂತದ್ದು ಗಮನಾರ್ಹ ವಿಷಯ. ಶಿವಪ್ಪನಿಗೆ ಹಣದ ಲೋಭವಿರಲಿಲ್ಲ. ಕೊಟ್ಟ ಮಾತಿಗೆ ತಪ್ಪುವುದು ಅವನಿಗೆ ಸಾಧ್ಯವಿಲ್ಲದ್ದು.

ಕೇವಲ ತನ್ನ ಅಭ್ಯರ್ಥಿತನವನ್ನು ಹಿಂದೆಗೆಸುವುದಕ್ಕೆ ರಾಮಲಿಂಗಪ್ಪನವರು ೧೦ ಸಾವಿರವನ್ನು ಕೊಡಬೇಕಾದರೆ ಆ ಹಣ ಎಲ್ಲಿಂದ ಬಂದಿರಬೇಕು? ಇದನ್ನು ಅಪ್ಪಾಜಿಯವರೇ ಕಳಿಸಿರಬಹುದು. ಅವರು ಯಾಕೆ ಹೀಗೆ ಖರ್ಚು ಮಾಡುತ್ತಾರೆ? ಇತ್ತೀಚೆಗೆ ಚುನಾವಣೆಯ ವಿಚಾರವಾಗಿ ಅವನು ಹಳ್ಳಿಗಳಲ್ಲಿ ಮಾತನಾಡುತ್ತಿದ್ದಾಗ ಅವನಿಗೆ ಒಂದು ಸಂಗತಿ ತಿಳಿದು ಬಂದಿತ್ತು. ರಾಮಲಿಂಗಪ್ಪನವರು ಕಂಟ್ರಾಕ್ಟು ಮಾಡಿ ಕಟ್ಟಿಸಿದ ಕಟ್ಟಡ, ಸೇತುವೆ, ಮೊದಲಾದವುಗಳಲ್ಲಿ ಎರಡು ವರ್ಷಗಳಲ್ಲಿಯೇ ಬಿರುಕು ಬಿಟ್ಟಿದೆಯಂತೆ, ಸ್ವಲ್ಪ ಸಿಮೆಂಟು ಹಾಕದೆ ಅವರು ಬರೀ ಕೆಮ್ಮಣ್ಣಿನಲ್ಲಿಯೇ ಇಟ್ಟಿಗೆಯನ್ನು ಕೂರಿಸುತ್ತಾರಂತೆ, ಹತ್ತು ಸಾವಿರಕ್ಕೆ ಕಟ್ಟಿಸಲು ಕಟ್ಟಡದ ಯೋಗ್ಯತೆ ಎರಡೂವರೆ ಸಾವಿರವೂ ಇರುವುದಿಲ್ಲವಂತೆ, ಇದಕ್ಕೆ ಅಪ್ಪಾಜಿಯವರದೂ ಕುಮಕ್ ಅಂತೆ. ಹೀಗೆ ಸಂಪಾದಿಸಿದ ದುಡ್ಡು ರಾಮಲಿಂಗಪ್ಪನವರಿಗೇ ಸೇರಿರಲಿ ಅಪ್ಪಾಜಿಯವರಿಗೆ ಸೇರಿರಲಿ ಚುನಾವಣೆಗಳಲ್ಲಿ ಖರ್ಚು ಮಾಡುತ್ತಾರೆ. ಇದು ಚುನಾವಣೆಯ ಖರ್ಚಿಗೆ ಬರುವ ಹಣದ ಮೂಲ.

ಶಿವಪ್ಪನ ಬೆಂಬಲಿಗರು ಯಾವ ಮೂಲದಿಂದ ಚುನಾವಣೆಯ ಖರ್ಚಿಗೆ ಹಣ ಹೊಂದಿಸುತ್ತಾರೆ ಎಂಬ ವಿಷಯವೇ ಇಡೀ ರಾಜಕೀಯವನ್ನು ಒರೆಗಲ್ಲಿಗೆ ಹಚ್ಚುತ್ತದೆ. ಮಂತ್ರಿಗಳು ತಮಗೆ ಸೋಲಾಗುವುದೆಂದು ತಿಳಿದು ಹಳ್ಳಿಗಳಲ್ಲಿ ಓಟಿಗೆ ಐದು ರೂಪಾಯಿಗಳಂತೆ ಕೊಡಲಾರಂಭಿಸಿದ್ದರು. ಶಿವಪ್ಪನ ಕಡೆಯವರು

---

೧. ಮತದಾನ – ಪುಟ – ೧೦೨

ಅದೇ ರೀತಿ ಹಣ ಖರ್ಚು ಮಾಡಬೇಕಾಗುತ್ತಿತ್ತು. ಚುನಾವಣೆಗೆ ಮುನ್ನಾ ದಿನ ಕಡಿಮೆಯೆಂದರೂ ಇಪ್ಪತ್ತು ಸಾವಿರ ರೂಪಾಯಿಗಳನ್ನು ಅವರಿಗೆ ಅನಿವಾರ್ಯವಾಗಿ ಖರ್ಚು ಮಾಡಬೇಕಾಗಿತ್ತು. ಅದನ್ನು ಚರ್ಚಿಸಲು ಶಿವಪ್ಪನನ್ನು ಕಾರಿನಲ್ಲಿ ಕರೆದುಕೊಂಡು ಹೋಗುತ್ತಾರೆ. ಕಾರಿನಲ್ಲೇ ಚರ್ಚೆ ಆರಂಭವಾಗುತ್ತದೆ. ಜತೆಗೆ ಬೆಂಗಳೂರಿನ ಸಾಹುಕಾರರೂ ಇರುತ್ತಾರೆ.

'ಕಾಸು ಕೊಟ್ಟು ಓಟು ಕೊಳ್ಳುವ ಕೆಲಸ ನನಗೆ ಬ್ಯಾಡ. ನಾನು ಸೋತರೂ ಪರವಾಗಿಲ್ಲ" ಎಂದು ಶಿವಪ್ಪ ವಾದಿಸಿದ.

'ಹಣ ಎಷ್ಟಾದರೂ ಸರಿ ನಾವು ಸುರಿಯುತ್ತೇವೆ. ನೀವು ಸುಮ್ಮನಿರಿ. ಅವರು ಎಂದರು'.

'ಆದ್ರೂ ನಾನು ಒಪ್ಪಲಿಲ್ಲ' – ಎಂಬ ಶಿವಪ್ಪನ ಹಟವನ್ನು ಅವರು ಕೇಳಲಿಲ್ಲ.

ಮನುಷ್ಯ ಹೇಗೆ ಪರಿಸ್ಥಿತಿಯ ಕೈಗೊಂಬೆಯಾಗುತ್ತಾನೆ ಎಂಬುದನ್ನು ಇಲ್ಲಿ ಕಾಣಬಹುದು.

"ಇಷ್ಟು ದುಡ್ಡೇ ಖರ್ಚಾಗ್ಯದೆ. ಇನ್ನೂ ನಾವು ಉಳಿದ ಖರ್ಚಿಗೆ ಹೆದರಬಾರ್ದು. ನೀವು ಒಪ್ಪದೇ ಇದ್ರೆ ಸೋಲೋದು ಖಂಡಿತ. ನೀವು ಸೋತ್ರೆ ನಮ್ಮ ಮರ್ಯಾದೆ ಏನಾಗಬೇಕು? ನಮ್ಮ ಮರ್ಯಾದೇನ ನೀವು ಯೋಚ್ನೆ ಮಾಡಾದೇ ಇಲ್ವಲ್ಲ"?.[೧]

ರಾಮಲಿಂಗೇಗೌಡರು ಡಾ॥ ಶಿವಪ್ಪನವರಿಗೆ ಅವರ ಪಕ್ಷದವರು ಮಾಡಿದ ತಂತ್ರವನ್ನು ನೇರವಾಗಿ ಹೇಳುತ್ತಾರೆ.

'ನೀವು ಎಲೆಕ್ಷನ್‌ಗೆ ಗೆದ್ರೂ ನಮ್ಗೆ ಸಂತೋಷ. ನೀವೇನ್ ಬ್ಯಾರೆ ಅಲ್ಲ. ನಮ್ಮ ನೆಂಟ್ರೇ. ಆದ್ರೆ ನೀವು ಸಾದರವಳ್ಳಿಯೋರ್ನ ಗೆಲ್ಲಿಸೋಕೆ ಹೋಂಟಿದೀರ. ನಾವು ನಮಗೆ ಏನು ಅನ್ಯಾಯ ಮಾಡಿದೀವಿ ಏಳಿ ಬಿಡಿ. ನಮ್ಮದೇನಿದ್ರೂ ತಪ್ಪು ತಿದ್‌ಕೊತ್ತೀವಿ. ಇದು ಶಿವಪ್ಪನಗೆ ಆಶ್ಚರ್ಯಕರ ವಿಷಯ. ಶಿವಪ್ಪ ಸಾದರವಳ್ಳಿಯವರ ಮಗ ಪ್ರಕಾಶ ಕುಮಾರನಗೆ ಸಹಾಯ ಮಾಡಲು ಹೋದವನಲ್ಲ. ಕಂಟ್ರಾಕ್ಟರು ಇನ್ನೂ ಮುಂದುವರೆಯುತ್ತಾರೆ'.

"ನಿಮಗೆ ಒಳ ಇಸ್ಯಾ ಗೊತ್ತಿಲ್ಲ ಅಂತ ಕಾಣಸ್ತೈತೆ. ನಮ್ಮ ಕಡೆ ಕೆಲ್ಸ ಮಾಡ್ತೀರಾ ಲಾಯ್ರು ಎಂಕಟೇಶಿ. ಸಾದರವಳ್ಳಿಯೋರ ಕಡೆಯೋರು ಅವರಿಗೆ ಬೆಂಗಳೂರಿನಿಂದ ಬ್ಯಾರೆ ಸಪೋರ್ಟಂತೆ. ಅವರೆಲ್ಲಿ ನಿಮಗೆ ಕುಮಕ್ ಕೊಡ್ತಾ ಇಲ್ವಾ? ನೀವು ಈ ಓಟಿಗೆ ಐದು ರೂಪಾಯಿ ಕೊಡ್ತಾ ಇಲ್ಲಿಲ್ವಾ.

೧. ಮತದಾನ – ಪುಟ – ೧೦೮

ಅದೆಲ್ಲ ಎಲ್ಲಿಂದ ಬಂತು? ನಮ್ಮ ಅಪ್ಪಾಜಿಯೋರ ಕಡೆ ಓಟು ನಿಮ್ಗೂ ಸೇರ್ಕಂಡು ಹಂಚಿ ಓಗ್ಲಿ. ಉಳ್ದಿದ್ರಲ್ಲಿ ತಾನು ವಡದ್ ಬಿಡಬೇಕು. ಅಂತ ಸಾದರವಳ್ಳಿಯೋರು ಮಾಡಿರಾ ಇಕಮತ್ತು ಇದು. ಆ ಜೋಡೀಹಳ್ಳಿ ಗುರುಮಲ್ಲೇಗೌಡ್ರನ್ನ ನಿಲ್ಸಿರೋದೂ ಅವರೇ ನಿಂಗಾಯತ್ರ ಕಡೆ ಓಟು ನಮ್ಮ ಅಪ್ಪಾಜಿಯೋರ್ಗೆ ಬರಬ್ಯಾಡದು ಅಂತ ಹಿಂಗೆ ಮಾಡಿಯವ್ರೆ ನಿಮ್ದು ಆಲ್ಸಂತ ಗುಣ ನಿಮ್ಗೆ ಅರ್ತವಾಗಕ್ಕಿಲ್ಲ".[೧]

೧೫ ವರ್ಷ ಸತತ ಅಸೆಂಬ್ಲಿಯಲ್ಲಿ ಮೆಂಬರ್ ಆಗಿದ್ದ ಸಾದರವಳ್ಳಿಯವರ ತಂತ್ರವಿದು. ಅಪ್ಪಾಜಿಯವರೂ ಸಾದರಹಳ್ಳಿಯವರೂ ಆ ಮತದಾರರ ಕ್ಷೇತ್ರದಲ್ಲಿ ಸಮಹುದ್ದರಿಗಳು. ಇಬ್ಬರೂ ಒಂದೇ ಕೋಮಿನವರು. ಒಬ್ಬರ ವಿರುದ್ಧ ಇಬ್ಬರನ್ನು ನಿಲ್ಲಿಸಿ ಮತ ಒಡೆಯುವ ಹವಣಿಕೆ ಇದೆ. ಮಂತ್ರಿ ಅಪ್ಪಾಜಿಯವರಿಗೆ ಸಲ್ಲುವ ಕೆಲ ಮತಗಳು ಜನಪ್ರಿಯ ಡಾ॥ ಶಿವಪ್ಪನಿಗೆ ಸಂದಿಯೇ ಸಂದುತ್ತದೆ. ಅಲ್ಲಿ ಮಂತ್ರಿ ಅಪ್ಪಾಜಿಯ ಕಾಯಂ ಮತಗಳು ಒಡೆಯುತ್ತವೆ. ಅವರ ಜೋಳಿಗೆಗೆ ಬೀಳುವ ಲಿಂಗಾಯತರ ಮತಗಳನ್ನು ಅವರಿಂದ ಕಸಿಯಬೇಕೆಂದರೆ ಲಿಂಗಾಯತ ಗುರುಮಲ್ಲೇಗೌಡ ಒಬ್ಬ ಅಭ್ಯರ್ಥಿ. ಹೀಗೆ ಮಂತ್ರಿ ಅಪ್ಪಾಜಿಯವರ ಮತಗಳು ಹಂಚಿಹೋಗಿ ತಾವು ಗೆಲ್ಲುವುದು ಸುಲಭವಾಗುತ್ತದೆಂದು ಸಾದರವಳ್ಳಿಯವರ ಹದಿನೈದು ವರ್ಷ ಅಸೆಂಬ್ಲಿ ಮೆಂಬರ್ ಆಗಿದ್ದುದರ ಅನುಭವ.

"ಇದು ಇಂದಿನ ರಾಜಕೀಯ. ಇಂದಿನ ರಾಜಕೀಯ ಗುಪ್ತವಾಗಿ ಉಳಿದಿಲ್ಲ. ಪತ್ರಿಕೆಗಳಲ್ಲಿ ಮತಕ್ಷೇತ್ರದ ಉಮೇದುವಾರರ ಪರಿಚಯ ಕೊಟ್ಟು ಯಾರು ಯಾರು ಹೇಗೆ ಹೇಗೆ ಎಂದು ಮೊದಲೇ ಪರಿಚಯ ಕೊಟ್ಟು ಎಲ್ಲಿ ಏನೇನು ಎಂಬುದನ್ನು ಮತದಾರರಿಗೆ ಪರಿಚಯಿಸಿ ಜಯಾಪಜಯಗಳ ಭವಿಷ್ಯವನ್ನು ನುಡಿಯಲಾಗಿರುತ್ತದೆ. ಎಲೆಕ್ಷನ್‌ನ ಮುನ್ನಾ ದಿನ ಪ್ರತಿಯೊಂದು ಹಳ್ಳಿಯಲ್ಲೂ ಹೆಂಡದ ಹೊಳೆ ಹರಿದಿರುತ್ತದೆ. ನೋಟುಗಳು, ಸೀರೆ-ಧೋತರುಗಳು ಹಂಚಿ ಹೋಗಿರುತ್ತವೆ. ಇದು ಇಂದು ನಮ್ಮ ಡೆಮಾಕ್ರೆಸಿ ಕೋಟ್ಯಾಂತರ ರೂಪಾಯಿಗಳನ್ನು ಖರ್ಚು ಮಾಡಿ ಎಲೆಕ್ಷನ್ ಮಾಡುತ್ತಾರೆ. ಈ ಹಣ ಎಲ್ಲಿಂದ ಬರುತ್ತದೆ ಎಂಬುದು ಶ್ಯಾಂಪಲ್ ಆಗಿ ಮತದಾನದಲ್ಲಿ ಕೆಲ ಸಂಗತಿಗಳಿವೆ. ವಾಸ್ತವವಾಗಿ ಇನ್ನೂ ಹಣದ ಮೂಲಗಳು ಬಹಳ ಇವೆ. ದೊಡ್ಡ ದೊಡ್ಡ ಉದ್ದಿಮೆದಾರರು ಪಕ್ಷಕ್ಕೆ ದೇಣಿಗೆಯೆಂದು ಉದಾರ ದಾನ ನೀಡುತ್ತಾರೆ. ಇದು ಮುಚ್ಚು ಮರೆಯಿಲ್ಲದೆ ನಡೆಯುತ್ತವೆ. ಆಡಳಿತ ಪಕ್ಷವೇ ಆಗಲಿ. ವಿರೋಧಿ ಪಕ್ಷವೇ ಆಗಲಿ, ಈ ರೀತಿ ಹಣ ಸಂಗ್ರಹಿಸುತ್ತವೆ".[೨]

ಹೀಗೆ "ಮತದಾನ" ನಮ್ಮ ದೇಶದ ರಾಜಕೀಯವನ್ನೆ ನಮ್ಮೆದುರು ತೆರೆದು ತೋರಿಸುವ ಸಮಕಾಲೀನ ರಾಜಕೀಯ ಕಾದಂಬರಿ. ಇದರಿಂದ ಭೈರಪ್ಪನವರು ಸಮಕಾಲೀನ ರಾಜಕೀಯ ಸಾಮಾಜಿಕ ಸಮಸ್ಯೆಗಳಿಗೆ ಸ್ಪಂಧಿಸಿದ ಕಾದಂಬರಿಕಾರರೆನಿಸಿಕೊಂಡಿದ್ದಾರೆ.

---

೧. ಮತದಾನ - ಪುಟ - ೧೧೧

೨. ಭೈರಪ್ಪನವರ ಕಾದಂಬರಿಗಳ ಸ್ವರೂಪ - ಪುಟ - ೧೨ - ೧೩.
ಡಾ॥ ಲೀಲಾವತಿ ತೋರಣಗಟ್ಟಿ

ಡಾ॥ ಶಿವಪ್ಪ ಸಾದರಹಳ್ಳಿಯವರ ಮಗಳನ್ನು, ಶಿವಗೆರೆಯವರ ಮಗಳನ್ನು ನಿರಾಕರಿಸಿ ಒಂದು ರೀತಿ ನಿರಾಸಕ್ತನಂತೆ ಬಾಳುವ ವ್ಯಕ್ತಿ. ಚುನಾವಣೆಯ ಗಲಾಟೆಯಲ್ಲಿ ತನ್ನ ನಿರ್ಲಕ್ಷ್ಯತನಕ್ಕೆ ಸತ್ತ ಒಬ್ಬ ರೋಗಿಯಿಂದಾಗಿ ತಾನು ತನ್ನ ವೃತ್ತಿ ಸಂಹಿತೆಯನ್ನು ಪಾಲಿಸಲಿಲ್ಲವೆನ್ನುತ್ತಿರುತ್ತಾರೆ. "ಈಗ ಯಾಕಪ್ಪಾ ಬಂದೆ ಜವರಾಯ ಕೊಂಡೊಯ್ದ ಮ್ಯಾಲೆ. ನೆನ್ನೆ ರಾತ್ರಿಯಾರ ನೀನು ಬಂದಿದ್ರೆ ನನ್ನ ಮಗ್ಳು ಉಳ್ಕೋತಿದ್ಲು" ಎಂದು ಸತ್ತವಳ ತಂದೆಯ ಗೋಳಾಟ ಅವನನ್ನು ತಪ್ಪಿತಸ್ಥನನ್ನಾಗಿ ಮಾಡುತ್ತದೆ. ತಾಯಿಯೂ ಸತ್ತ ನಂತರ ಅವನು ಒಂದು ರೀತಿ ನಿರಾಸಕ್ತತೆಯನ್ನು ಬೆಳೆಸಿಕೊಳ್ಳುತ್ತಿರುತ್ತಾನೆ. ಆದರೆ, ತನ್ನ ವೃತ್ತಿಯಲ್ಲಿ ಅದನ್ನೆಲ್ಲಾ ಮರೆಯುತ್ತಿರುತ್ತಾನೆ.

ಡಾ॥ ಲೀಲಾವತಿ ತೋರಣಗಟ್ಟಿ

ಒಮ್ಮೊಮ್ಮೆ ಅವನೆಲ್ಲಿ ಎಲ್ಲ ತೊರೆದು ಹಿಮಾಲಯಕ್ಕೆ ಹೋಗುತ್ತಾನೋ ಎಂಬ ಅನಿಸಿಕೆ ಬರುತ್ತದೆ.

ಗಾಂಧೀಜಿಯ ಆದರ್ಶವನ್ನಿಟ್ಟುಕೊಂಡು ಹಳ್ಳಿಗೆ ಶುಶ್ರೂಷೆಗೆ ಬಂದು ತನ್ನ ಕೈಲಾದ ಮಟ್ಟಿಗೆ ಸೇವೆ ಮಾಡುತ್ತ ಸಾಗಿದ ಶಿವಣ್ಣನಿಗೆ ಎಲೆಕ್ಷನ್ ಒಂದು ಪಾಠ ಕಲಿಸಿತ್ತು. ಚುನಾವಣೆಯಲ್ಲಿ ಸೋತರೂ ಅವನಿಗೆ ಸಾಕಷ್ಟು ಹೊರಜಗತ್ತಿನ ಬಗ್ಗೆ ತಿಳಿದಿತ್ತು. ತನ್ನ ಶುಶ್ರುಷಾ ಕೇಂದ್ರವು ಹೆಚ್ಚು ಸುಸಜ್ಜಿತವಾಗಿ ಜನರಿಗೆ ಹೆಚ್ಚಿನ ಅನುಕೂಲವಾಗಬೇಕಾದರೆ ಹಣ ಬೇಕು ಎಂಬುದನ್ನು ಅರಿತಿದ್ದ.

"ಶಿವಪ್ಪ ಸರಿಯಾಗಿ ರೋಗಿಯ ಮುಖವನ್ನು ಮೈಯನ್ನು ನೋಡಿದ ಕಿವಿಗೆ ಹತ್ತು ಕಡುಕು. ಕೈಗೆ ಬಂಗಾರದ ಕಪ್ಪ, ಕುತ್ತಿಗೆಗೆ ಚೈನು. ಶರಟಿಗೆ ಚಿನ್ನದ ಗುಂಡಿಗಳನ್ನು ಹಾಕಿಕೊಂಡು ಅವನು ಶ್ರೀಮಂತನೇ ಎಂಬುದರಲ್ಲಿ ಸಂದೇಹ ಉಳಿಯಲಿಲ್ಲ. ಹುಷಾರ್ ಮಾಡಾದು ನನ್ನ ಜವಾಬ್ದಾರಿ. ಒಟ್ಟು ಒಂದು ಸಾವಿರ ರೂಪಾಯಿ ಆಯ್ತದೆ ಎಲ್ಲಾ ಅಡ್ವಾನ್ಸ್ ಕೊಡಬೇಕು ಎಂದು ಹೇಳಿದ ತಕ್ಷಣ ರೋಗಿ ಸದ್ಯಕ್ಕೆ ಐನೂರು ತಗಾಳಿ ಇನ್ನೆಲ್ಡು ದಿನದಾಗೆ ಐನೂರು ತರಿಸಿ ಕೊಡ್ತೀನಿ" ಎಂದ.

ಈ ಹೊಸಪದ್ಧತಿಯನ್ನು ಜಾರಿಗೆ ತಂದಾಗ ಅನುಕೂಲಸ್ಥರೆಲ್ಲರೂ ಅಪಪ್ರಚಾರ ಮಾಡಲು ಪ್ರಾರಂಭಿಸುತ್ತಾರೆ. 'ಜನತಾ ಶಶ್ರೂಷಾಲಯ ಧನತಾ ಶುಶ್ರೂಷಾಲಯವಾಗೈತೆ' ಎಂಬಂತಹ ಮಾತುಗಳನ್ನು ಆತ ಕೇಳಬೇಕಾಗುತ್ತದೆ. ಆದರೆ, ಇದು ಕೆಲವೇ ದಿನ ಮಾತ್ರ. ಉಚಿತ ಚಿಕಿತ್ಸೆ ಪಡೆದ ಬಡವರು ಈ ಅಪಪ್ರಚಾರವನ್ನು ತಡೆಗಟ್ಟುತ್ತಾರೆ.

ಹಿಂದೊಮ್ಮೆ ತಾನು ಮದುವೆಯಾಗಲು ಅಪೇಕ್ಷಿಪಟ್ಟಿದ್ದ. ಆದರೆ, ತನ್ನ ಆದರ್ಶಗಳಿಗೆ ಹೆಣ್ಣು ಕೊಡುವವರ ಬೆಂಬಲ ಇಲ್ಲ ಎಂಬ ಸುದ್ದಿ ತಿಳಿದದ್ದರಿಂದ ಮದುವೆ ಬೇಡ ಎಂದು ನಿರಾಕರಿಸಿದ್ದ ರಾಮಲಿಂಗೇಗೌಡರ ಎರಡನೆ ಮಗಳು ರಂಗಲಕ್ಷ್ಮಿ ಮೈಸೂರಿನ ಆಸ್ಪತ್ರೆಯಲ್ಲಿ ನರ್ಸಾಗಿ ತರಬೇತಿ ಪಡೆಯುತ್ತಿದ್ದವಳು ಸಿಕ್ಕಾಗ ಈಗ ಮದುವೆ ಆಗುವ ತನ್ನ ಇಂಗಿತವನ್ನು ಶಿವಪ್ಪ ಹೇಳಿಕೊಳ್ಳುತ್ತಾನೆ. ತನ್ನ ಅಕ್ಕ ಸತ್ತದ್ದರಿಂದ ಪುಟ್ಟತಮ್ಮಯ್ಯನನ್ನು ಎರಡನೇ ಹೆಂಡತಿಯಾಗಿ ಮದುವೆಯಾಗಬೇಕಾದ ಒತ್ತಡಕ್ಕೆ ಸಿಕ್ಕಿದ್ದ ರಂಗಲಕ್ಷ್ಮಿಗೆ ತನ್ನ ಗಂಡನ 'ಬಂಟಳಿಕೆ' ಮನೋಭಾವದಿಂದಾಗಿ ಜಿಗುಪ್ಸೆಯಾಗಿರುತ್ತದೆ. ಸುಖದ ದಿನಗಳಲ್ಲಿ ತನ್ನ ತಂದೆಯಿಂದ ಏನೆಲ್ಲ ಸೌಲಭ್ಯಗಳನ್ನು ಪಡೆದಿದ್ದರೂ; ಅವರ ಕಷ್ಟದ ದಿನಗಳಲ್ಲಿ ಅವರೇ ಕಟ್ಟಿಸಿಕೊಟ್ಟ ಮನೆ ಮಾರಲು ಹಿಂದೇಟು ಹಾಕಿದ್ದರಿಂದ ತನ್ನ ಸ್ವಾರ್ಥದ ಬಗ್ಗೆ ಕ್ರೋಧ ಉಂಟಾಗುತ್ತದೆ.

ಜಮೀನು ಮಾರಿ ತಂದೆಯ ಸಾಲವನ್ನು ತೀರಿಸಬೇಕು ಎನ್ನುವ ರಂಗಲಕ್ಷ್ಮಿಯ ತೀರ್ಮಾನಕ್ಕೆ ವಿರುದ್ಧವಾಗಿ ಸಲಹೆ ಕೊಡಲು ಬಂದ ಗಂಡನ ನಡವಳಿಕೆಯಿಂದ ಜಿಗುಪ್ಸೆಗೊಂಡು ಆತನೊಡನೆ ಸಂಬಂಧವನ್ನು ಕಡಿದುಕೊಳ್ಳುವ ನಿರ್ಧಾರಕ್ಕೆ ಬರುತ್ತಾಳೆ. ನಂತರ ಮೈಸೂರಿನಲ್ಲಿ ನರ್ಸ್ ತರಬೇತಿಗೆ ಬರುತ್ತಾಳೆ. ಅಲ್ಲಿ ಶಿವಪ್ಪನ ಭೇಟಿಯಾಗಿ ಆತನ ಇಂಗಿತದ ಬಗ್ಗೆ ಯೋಚಿಸುತ್ತಾಳೆ. ಶಿವಪ್ಪನ ಧ್ಯೇಯ, ಆದರ್ಶಗಳ ಬಗ್ಗೆ, ಆತನ ನಡವಳಿಕೆಯ ಬಗ್ಗೆ ಮೊದಲಿನಿಂದಲೂ ಅವಳಿಗೆ ಅಭಿಮಾನ; ಆಕರ್ಷಣೆಗಳು ಇರುತ್ತವೆ. ಆತನ ಸೇವಾ ಜೀವನದಲ್ಲಿ ಸಹಧರ್ಮಿಣಿಯಾಗಿ ದುಡಿಯಲು ರಂಗಲಕ್ಷ್ಮಿ 'ಒಪ್ಪಿಗೆ' ನೀಡುತ್ತಾಳೆ.

ಸಮಕಾಲೀನ ರಾಜಕಾರಣದ ವಿವಿಧ ಮಗ್ಗಲುಗಳನ್ನು ಅದರ ಎಲ್ಲ ಸೂಕ್ಷ್ಮತೆಯೊಡನೆ ಅತ್ಯಂತ ವಾಸ್ತವಿಕ ರೀತಿಯಲ್ಲಿ ಚಿತ್ರಿಸುವುದರಲ್ಲಿ ಭೈರಪ್ಪನವರು ಯಶಸ್ವಿಯಾಗಿದ್ದಾರೆ. ಅತ್ಯಂತ ಸರಳವಾದ (ಹಳೆ ಮೈಸೂರಿನ) ಭಾಷೆಯಲ್ಲಿ ಸಂಕೀರ್ಣವಾದಂಥ ವಿಷಯವನ್ನು ಸುಲಭ ನಿರೂಪಣೆಯಲ್ಲಿ ಹೇಳಿರುವುದು ಈ ಕಾದಂಬರಿಯ ವೈಶಿಷ್ಟ್ಯವಾಗಿದೆ. ಅಖಿಲ ಕರ್ನಾಟಕ ರಾಜ್ಯ ನಿರ್ಮಾಣ ಸಂಧರ್ಭದ ಪ್ರಸಂಗಗಳನ್ನು ಪ್ರಸ್ತಾಪಿಸಿರುವುದರಿಂದ ಪ್ರಾದೇಶಿಕ ಚೌಕಟ್ಟಿಗೆ 'ಕಳೆ' ಬಂದಿದೆ. ರಾಜಕೀಯ ವಸ್ತುವನ್ನಾರಿಸಿಕೊಂಡಿದ್ದರೂ ಯಾವುದೇ ರಾಜಕೀಯ ಪಕ್ಷ ಅಥವಾ ಪಂಗಡಗಳ ನೀತಿ–ನಿಲುವುಗಳ ಖಂಡನೆ–ಮಂಡನೆಗೆ ಆಸ್ಪದ ಕೊಡದೇ ಇರುವುದರಿಂದ ರಾಜಕಾರಣದ ವಸ್ತುವನ್ನು ಆರೋಗ್ಯ ಪೂರ್ಣ ದೃಷ್ಟಿಯಿಂದ ನಿರ್ವಹಿಸಿರುವ ರೀತಿಯಿಂದ 'ಮತದಾನ' ಮೆಚ್ಚುಗೆಗಳಿಸುತ್ತದೆ.

## ಅಧ್ಯಾಯ – ೩

# "ಅವಸ್ಥೆ ಕಾದಂಬರಿಯಲ್ಲಿನ ಪಾತ್ರಗಳು"

ಪಾತ್ರಗಳು ಕಾದಂಬರಿಯ ಜೀವಸತ್ವ ಲೇಖಕನ ವಿಚಾರಧಾರೆಗಳು ಪಾತ್ರಗಳ ಮೂಲಕ ಅಭಿವ್ಯಕ್ತಗೊಳ್ಳುತ್ತವೆ. ಆತನ ಉದ್ದೇಶ ಮತ್ತು ಮನೋಧರ್ಮಗಳನ್ನು ಆಯಾ ಪಾತ್ರಗಳು ಎತ್ತಿ ಹಿಡಿಯುತ್ತವೆ.

ಅವಸ್ಥೆ ಕಾದಂಬರಿಯಲ್ಲಿ ಕಂಡುಬರುವ ಪ್ರಮುಖ ಪಾತ್ರವೆಂದರೆ ಕೃಷ್ಣಪ್ಪ. ಈತ ಕಾದಂಬರಿಯ ನಾಯಕನಂತೆ ಕಂಡುಬರುತ್ತಾನೆ. ಈ ಕಾದಂಬರಿಯಲ್ಲಿ ಅನೇಕ ಪ್ರಧಾನ ಪಾತ್ರಗಳು, ಜೊತೆಗೆ ಅ ಪ್ರಧಾನ ಪಾತ್ರಗಳಿಗೆ ಪೂರಕವಾದ ಹಲವು ಪಾತ್ರಗಳು ಕಂಡುಬರುತ್ತವೆ. ಇಲ್ಲಿ ಕಂಡುಬರುವ ಪುರುಷ ಪಾತ್ರಗಳು, ಸ್ತ್ರೀ ಪಾತ್ರಗಳಲ್ಲಿ ಪುರುಷ ಪಾತ್ರಗಳದ್ದೇ ಮೇಲುಗೈ ಸ್ತ್ರೀ ಪಾತ್ರಗಳ ಅಷ್ಟೇನು ಪ್ರಾಧಾನ್ಯವನ್ನು ಪಡೆದುಕೊಂಡಿಲ್ಲ.

ಈ ಕಾದಂಬರಿಯಲ್ಲಿ ಬರುವ ಪುರುಷ ಪಾತ್ರಗಳೆಂದರೆ ಕೃಷ್ಣಪ್ಪ, ಮಹೇಶ್ವರಯ್ಯ, ಭೈರಾಗಿ. ಅಣ್ಣಾಜಿ, ಹನುಮನಾಯ್ಕ, ನಾಗೇಶ, ಸ್ತ್ರೀಪಾತ್ರಗಳೆಂದರೆ ಗೌರಿದೇಶಪಾಂಡೆ, ಸೀತೆ, ಉಳಿದ ಪಾತ್ರಗಳು ಅಷ್ಟು ಕ್ರಿಯಾಶೀಲವಾಗಿಲ್ಲ ಎಂದು ಹೇಳಬಹುದು.

ಈ ಕಾದಂಬರಿಯ ಪಾತ್ರಗಳನ್ನು ಮತ್ತು ಘಟನೆಗಳನ್ನು ನೋಡಿದಾಗ ನಾವು ಅವುಗಳಲ್ಲಿ ಒಂದು ಅಪೂರ್ವ ವಿನ್ಯಾಸವನ್ನು ಕಂಡುಕೊಳ್ಳಬಹುದು.

೧) ಇರುವ ವ್ಯವಸ್ಥೆಯನ್ನು ಬಲಪಡಿಸಿ ಅದರಿಂದ ಲಾಭ ಪಡೆಯುತ್ತಿರುವವರು
(ಮುಖ್ಯಮಂತ್ರಿ, ವೀರಪ್ಪ, ಚೆನ್ನವೀರಯ್ಯ, ಮುಂತಾದವರು)

೨) ವ್ಯವಸ್ಥೆಯನ್ನು ನಿರಾಕರಿಸಿ ಹೊರಗಿನಿಂದ ಅದನ್ನು ನಾಶಮಾಡಲು ಯತ್ನಿಸುತ್ತಿರುವವರು
(ಅಣ್ಣಾಜಿ, ನಾಗರಾಜ, ಇತರರು)

೩) ವ್ಯವಸ್ಥೆಯನ್ನು ಒಪ್ಪಿಕೊಂಡು ಅದರೊಳಗಿನಿಂದಲೇ ಅದನ್ನು ಉತ್ತಮಗೊಳಿಸಲು ಯತ್ನಿಸುತ್ತಿರುವವರು (ಕೃಷ್ಣಪ್ಪ, ಗೌರಿದೇಶಪಾಂಡೆ ಮತ್ತು ಗೋಪಾಲರೆಡ್ಡಿ)

೪) ಕೊನೆಯದಾಗಿ ವ್ಯವಸ್ಥೆಗೂ ನಮಗೂ ಸಂಬಂಧವೇ ಇಲ್ಲದಂತೆ ಅದರಂಚಿನಲ್ಲಿರುವವರು
(ಭ್ಯರಾಗಿ, ಮಹೇಶ್ವರಯ್ಯ, ಹನುಮನಾಯ್ಕ, ಕೃಷ್ಣಪ್ಪನ ತಾಯಿ ಇತ್ಯಾದಿ)

ವ್ಯವಸ್ಥೆಯೊಡನಿರುವ ಈ ಅನೇಕ ಸಮೀಕರಣಗಳಲ್ಲಿ ಕೃತಿ ಕೆಲವನ್ನು ಸಂಪೂರ್ಣ ನಿರಾಕರಿಸಿ ಕೆಲವನ್ನು ಕೇವಲ ಆಶ್ಚರ್ಯದಿಂದ ಕಂಡರೆ ಮತ್ತೆ ಕೆಲವನ್ನು ಅಪರಿಹಾರ್ಯವಾಗಿ ಕೆಲವು ಶರತ್ತುಗಳೊಡನೆ ಒಪ್ಪಿಕೊಳ್ಳುತ್ತದೆ.

**ಪುರುಷ ಪಾತ್ರಗಳು :-**

**ಕೃಷ್ಣಪ್ಪ :** ಕೃಷ್ಣಪ್ಪ ಅವಸ್ಥೆಯ ಕೇಂದ್ರ ಪಾತ್ರವಾಗಿ ಕಂಡುಬರುತ್ತಾನೆ. ಈತ ಪ್ರತಿನಿಧಿಸುವ ರಾಜಕೀಯ ಪರಿಸರ ಅತ್ಯಂತ ವೈವಿಧ್ಯಮಯವಾದ ಜೀವನ ಧೋರಣೆಗಳಿಂದ ಶ್ರೀಮಂತಗೊಂಡದ್ದಾಗಿದೆ. ಕಾದಂಬರಿಯ ಕೇಂದ್ರ ಲಕ್ಷ್ಯವನ್ನು ಈ ಪರಿಸರವೇ ನಿಯಂತ್ರಿಸುತ್ತದೆ. ಈ ಪರಿಸರದ ಬೇರೆ ಬೇರೆ ಪದರುಗಳನ್ನು ಅವಲೋಕಿಸುವುದರ ಮೂಲಕ ಕೃಷ್ಣಪ್ಪನ ಹಾಗೂ ಕಾದಂಬರಿಯ ಪ್ರಮುಖ ಸೆಳೆತಗಳ ದರ್ಶನವಾಗಲು ಸಾಧ್ಯವಿದೆ.

ಹುಡುಗಾಟಿಕೆಯಲ್ಲಿ ಕೃಷ್ಣಪ್ಪಗೌಡ ಬಹಳ ಒಳ್ಳೆ ಈಜುಗಾರ. ನದಿ ತುಂಬಿಹರೀತಿದ್ದಾಗ ಒಂದು ದಂಡೆಯಿಂದ ದುಮುಕಿ ಇನ್ನೊಂದು ದಂಡೆಗೆ ಸೇರತ ಇದ್ದ. ಕೃಷ್ಣಪ್ಪ ಬಹಳ ಕಡುಕೋಪಿ. ಹೈಸ್ಕೂಲು ಓದುತ್ತಿದ್ಧಾಗ ತನ್ನ ಸ್ನೇಹಿತನೊಬ್ಬನ ರಿಪೇರಿಗೆ ಕೊಟ್ಟ ವಾಚು ತರೋಕ್ಕೆ ಅಂತ ಅಂಗಡಿಗೆ ಹೋದ. ಅಂಗಡಿಯವನಿಗೊ ಈತ ಗೊತ್ತು. ಚೆನ್ನಾಗಿಯೇ ಗೊತ್ತು. ಆದರೆ ಬಡವನಾಗಿದ್ದ ಈ ಕೃಷ್ಣಪ್ಪನ ಓಡಾಟದ ಗತ್ತು ಕಂಡರೆ ಈ ಅಂಗಡಿಯವನಿಗೆ ಅಸೂಯೆ ನಿಮ್ಮನ್ನು ನಂಬಿ ಹೇಗೆ ಕೊಡೋಕೆ ಸಾಧ್ಯರೀ ವಾಚನ್ನು? ಎಂದರಂತೆ. ಒಂದು ಕಣ್ಣಿಗೆ ಭೂತ ಕನ್ನಡಿಯ ಗಾಜು ಸಿಕ್ಕಿಸಿಕೊಂಡು – ವಕ್ರವಾಗಿ ನೋಡುತ್ತಾ. ರೀ ನಿಮ್ಮ ಈ ಗಾಜಿನ ಗೂಡನ್ನು ಪುಡಿ ಪುಡಿ ಮಾಡಿಬಿಡುತ್ತೇನೆ. ಇನ್ನೊಂದು ಸಾರಿ ನೀವು ಹಾಗೆ ಅಂದರೆ ಅಂದನಂತೆ ಕೃಷ್ಣಪ್ಪ. ಬಡವನ ಸಿಟ್ಟು ದವಡೆಗೆ ಮೂಲ ಅಂದನಂತೆ ಅಂಗಡಿಯವನು. ಚಿಮುಟದಿಂದ ಏನೋ ಕೆದಕುತ್ತಾ ಹಾಗಂದಿದ್ದೇ ರಿಪೇರಿ ಸಲಕರಣೆಗಳನ್ನೂ ಬಿಚ್ಚದ ವಾಚುಗಳನ್ನೂ ಇಟ್ಟದ್ದ ಗಾಜಿನ ಗೂಡನ್ನು ಎತ್ತಿ ಕೃಷ್ಣಪ್ಪ ಫಳ್ ಅಂತ ನೆಲಕ್ಕೆ ಬಗೆದು ನಡೆದು ಬಿಟ್ಟನಂತೆ. ಅವನ ಕೋಪ ಕಂಡಾಗ ಎಂಥವರಾದೂ ನಡುಗಿಬಿಡ್ತ ಇದ್ದರು.

ಬಾಲಕನಾಗಿದ್ದಾಗ ಕೃಷ್ಣಪ್ಪನಿಗೆ ಧನ ಕಾಯುವ ಕೆಲಸ. ಕಂಬಳಿಕೊಪ್ಪ ಹಾಕಿಕೊಂಡು ಕೈಯಲ್ಲೊಂದು ಕತ್ತಿ ಕೊಳಲು ಹಿಡಿದು ತನ್ನ ಹಳ್ಳಿಯ ದನಗಳನ್ನೆಲ್ಲ ಮೇಯಿಸಿಕೊಂಡು ಬರುತ್ತಿದ್ದ ಕಥೆಯನ್ನವನು ಅದರಲ್ಲೇನೋ ತನಗೆ ಮಾತ್ರ ತಿಳಿಯುವ ಅರ್ಥಗಳು ತುಂಬಿವೆ ಎನ್ನುವಂತೆ ಹೇಳುವುದು. ಸಾಯುತ್ತಿರುವ ಅವನಿಗೆ ತನ್ನ ಹಿಂದಿನ ಬದುಕಿನಲ್ಲಿ ಆಗೀಗ ದಿವ್ಯವಾದದ್ದು ಪ್ರವೇಶಿಸಿದ್ದಿದೆ. ಎಂದು ಈಗ ಅನ್ನಿಸುವುದು

ವಸ್ತುನಿಷ್ಠ ಸತ್ಯವೋ, ಅಥವಾ ಅಂಥ ನಂಜಿಕೆ ಸದ್ಯದ ಕ್ಷುದ್ರ ದೆಸೆಯನ್ನು ಗೆಲ್ಲಲು ಅಗತ್ಯವೋ ಹೇಗೆ ಹೇಳುವುದು? "ವೈಚಾರಿಕವಾಗಿ ಕೃಷ್ಣಪ್ಪ ನಿರೀಶ್ವರವಾದಿ, ಜೊತೆಗೆ, ಕಬೀರ, ಅಲ್ಲಮ, ಮೀರ, ಪರಮಹಂಸ ಇತ್ಯಾದಿ ದೈವಿಕ ತಲೆ ತಿರುಕರನ್ನು ಮೆಚ್ಚುಗೆ ಹಾಸ್ಯ ಅನುಮಾನಗಳಿಂದ ಅವರೆ ತನಗೆ ಪರಮ ಆಪ್ತರೆಂಬಂತೆ ಕಿಚಾಯಿಸುವನು."

ಆದ್ದರಿಂದ ಅವನ ಒಟ್ಟು ನಿಲುವೇನು ಎಂದು ಹೇಳುವುದು ಕಷ್ಟದ ವಿಷಯವೇ.

ಅನಂತಮೂರ್ತಿಯವರು ಈ ಕೃತಿಯುದ್ದಕ್ಕು ಮುಖ್ಯವಾಗಿ ಆಳದಲ್ಲೇ, ಈ ಜಗತ್ತಿನ ಸ್ಥಿತಿಯಲ್ಲಿಯೇ ಅಸ್ಥಿತಿ ಇದೆ ವ್ಯವಸ್ಥಯಲ್ಲಿಯೇ ಅವ್ಯವಸ್ಥೆ ಇದೆ ಮತ್ತು ಒಂದು ಇನ್ನೋಂದರ ಬೀಜವಾದ ಕಾರಣ ವಳಿತು–ಕೆಡುಕು ವ್ಯವಸ್ಥೆ–ಅವ್ಯವಸ್ಥೆ, ಸ್ಥಿತಿ–ಅಸ್ಥಿತಿ. ಇವು ಒಂದು ಮತ್ತೋಂದಕ್ಕೆ ಜನ್ಮ ಕೋಡುತ್ತಾ, ಒಂದನ್ನು ಮತ್ತೊಂದು ಬೆಳೆಸುತ್ತಾ, ಪೋಷಿಸುತ್ತಾ ಹೀಗೆ ದ್ವಂದ್ವಾತಕವಾಗಿ ಈ ದ್ವಂದ್ವ ಜಗತ್ತಿನಲ್ಲಿವೆ ಎಂಬ ಮೂಲದಲ್ಲಿ ದಾರ್ಶನಿಕ ರೂಪದ ಸತ್ಯವನ್ನು ಸಾಹಿತ್ಯಿಕವಾಗಿ ನಮಗೆ ಸಾಕಾರಪಡಿಸುತ್ತದೆ.

ಈ ವಿರೋಧಾಭಾಸಾತ್ಮಕ ದ್ವಂದ್ವಾತ್ಮಕ ಮಾನವಾವವಸ್ಥೆಯನ್ನು ಕೃತಿಯ ಮುಖ್ಯ ಪಾತ್ರವಾದ ಕೃಷ್ಣಪ್ಪನಲ್ಲಿ ನಾವು ಕಾಣಬಹುದು. ಕಥೆಯ ಒಂದು ಭಾಗದಲ್ಲಿ ಕೃಷ್ಣಪ್ಪ ತನ್ನ ಜೀವನದ ಸಂಹಾವಲೋಕನ ಮಾಡುತ್ತಾ ಹೀಗೆ ತನ್ನನು ತಾನೇ ಗುರುತಿಸಿಕೊಳ್ಳುತ್ತಾನೆ, "ರಾಮು ಮತ್ತು ಸಂಗಡಿಗರು ಶಿಕ್ಷಿಸುವುದು ಕ್ಷುಲ್ಲಕ ಎನ್ನುವಂತೆ ಗಂಭೀರವಾಗಿ ತಾನು ವರ್ತಿಸಿದ್ದರೂ ಆ ಶಿಕ್ಷೆಯನ್ನು ತಾನು ಸೂಕ್ಷ್ಮವಾಗಿ ಬಯಸಿರಲೂಬಹುದು ಎನಿಸುತ್ತದೆ. ಈಗ ಕೃಷ್ಣಪ್ಪನಿಗೆ ಮುಂದೆ ಅವನ ರಾಜಕೀಯ ಜೀವನದಲ್ಲಿ ಇಂಥ ಪ್ರಸಂಗಗಳೆಷ್ಟೋ ಎದ್ದಾಗ ಸೇಡು ತೀರಿಸುತ್ತಿದ್ದ ನಿರಾಸಕ್ತಿಯೇ ತನ್ನ ಎದುರಾಳಿಗಳನ್ನು ನಿರ್ನಾಮ ಮಾಡಬಲ್ಲ ಅಸ್ತ್ರವಾದದ್ದಿವೆ. ತಾನು ಬಾಯಾರ ಹೇಳದೆ ಆಗಬೇಕಾದ್ದು ಬೇರೆಯವರಿಂದ ಆದದ್ದಿದೆ. ತಾನು ಶುಚಿಯಾಗಿದ್ದೂ ಬೇರೆಯವರ ಕೈಯಲ್ಲಿ ಇಂಥ ಕೆಲಸ ಮಾಡಿಸಿಕೊಳುವುದು ಸರಿಯೇ:?........

ಇಂತಹ ದ್ವಂದ್ವ ಮೋದಲಿನಿಂದಲೂ ಕೃಷ್ಣಪ್ಪನ ವ್ಯಕ್ತಿತ್ವವನ್ನು ರೂಪಿಸುತ್ತದೆ. ವೈಚಾರಿಕ ಕೃಷ್ಣಪ್ಪ ನಿರೀಶ್ವರವಾದಿಯಾದರೂ ಆಗಾಗ್ಗೆ ಆಗಮೋಕ್ತ ರೀತಿಯಲ್ಲಿ ದೈವಾರಾಧನೆ ಮಾಡಿ ರಹಸ್ಯಮಯ ಸ್ವಚ್ಛಂದ ಸ್ಥಿತಿಯನ್ನು ಅನುಭವಿಸುತ್ತಾನೆ. ಮೊದಲೊಂದು ಸಲ ತಾನು ಓದುವಾಗ ತನ್ನ ಮಾವನ ಮನೆಯಲ್ಲಿ ಮಂಡಲ ಬರೆದು, ದೇವಿಯನ್ನು ಪ್ರತಿಷ್ಠಾಪಿಸಿ ಸೌಂದರ್ಯ ಲಹರಿಯನ್ನು ಓದಿ ಪೂಜೆ ಮಾಡುತ್ತಾನೆ. ಮೂರು ದಿನಗಳ ತನಕ, ಎರಡನೆಯ ಸಲ ವಾರಂಗಲ್ ಜೈಲಿನಲ್ಲಿ ಮಾನಸಿಕವಾಗಿ ಶ್ರೀ ಚಕ್ರದ ಉಪಾಸನೆಯನ್ನು ಮಾಡುತ್ತಾನೆ. ಮತ್ತೊಬ್ಬರ ಕಷ್ಟ–ನಷ್ಟಗಳಗೆ ಸದಾ ಸ್ಪಂದಿಸುವವನೇ ಆತ್ಮರತ ಸ್ವಾಭಿಮಾನ

ಮತ್ತು ಸಿಟ್ಟಿನ ಮೂರ್ತಿಯೂ ಆಗಿದ್ದಾನೆ. ಮೊದಲಿನಿಂದಲೂ ತಾನು ಪ್ರೀತಿಸಿದ ಗೌರಿಗೆ ಕೊನೆಗೂ ತನ್ನನ್ನು ಪ್ರೇಮದಲ್ಲಿ ಅರ್ಪಿಸಿಕೊಳ್ಳಲು ಆಗದೆ – ಏಕೆ ಎಂದು ತೊಳಲುತ್ತಾನೆ. "ಕ್ರಾಂತಿಗಾಗಿ ಬದುಕುವವನು ವ್ಯಾಮೋಹಿಯಾಗಿರಕೂಡದು "ಎಂದು ಅಣ್ಣಾಜಿಗೆ ಉಪದೇಶ ಮಾಡುವವನೇ ಸ್ವತಃ ಹೆಂಗಸರ ಚಟದಲ್ಲಿ ಒದ್ದಾಡುತ್ತಾನೆ. ತಾನು ಕೊನೆಯಲ್ಲಿ ಸಕ್ರೀಯ ರಾಜಕಾರಣಕ್ಕೆ ರಾಜೀನಾಮೆ ಕೊಡುವ ನಿರ್ಧಾರ ಮಾಡುವ ತನಕವೂ ತಾನು ವೀರಪ್ಪನ ಜಾಲದಲ್ಲಿ ನಿಧಾನವಾಗಿ ಸಿಕ್ಕಿಬೀಳುತ್ತಿರುವುದನ್ನು ನಾನಾ ರೀತಿಯ ರಾಶನಲೈಸೇಶನ್ಸ್ ಮೂಲಕ ಸಮರ್ಥಿಸಿಕೊಳ್ಳುತಾನೆ.

ಈ ಹಿನ್ನೆಲೆಯಲ್ಲಿ ನೋಡಿದರೆ ಕೃಷ್ಣಪ್ಪನಿಗೆ ಬಡಿದಿರುವ ಪಾರ್ಶ್ವವಾಯು ಎಷ್ಟು ಸಹಜ ಹಾಗೂ ಸೂಕ್ತವಾದ ರೂಪಕವೆಂದು ನಮಗೆ ಅರ್ಥವಾಗುತ್ತದೆ. ಕೃತಿಯಲ್ಲಿ ಕೃಷ್ಣಪ್ಪನಿಗೆ ಸಾವು ಖಚಿತವಾದರೆ ಅವನು ಈ ದ್ವಂದ್ವಗಳಿಂದ ದೂರ ಇರಲು ಸಾಧ್ಯವಾಗಿ ದ್ವಂದ್ವಮಯ ಪ್ರಪಂಚವನ್ನು ಅರ್ಥಮಾಡಿಕೊಳ್ಳಲು ಆಗುವುದೇ ಇಲ್ಲ. ಹುಟ್ಟು–ಸಾವು ಎರಡೂ ಖಚಿತವಾದ ಒಂದೇ ಸರಳ ರೇಖೆಯಲ್ಲಿ ಮುಂದೆ ಹೋಗುತ್ತಾ ಜೀವನವನ್ನು ಅದರ ರಹಸ್ಯವನ್ನು–ಸರಳಗೊಳಿಸುತ್ತದೆ. ಆದರೆ ಅತ್ತ ಬದುಕಿಯೂ ಇಲ್ಲದ ಇತ್ತ ಸಾವೂ ಖಚಿತವಿರದ, ತಾನು ಅಸಹಾಯಕನಾಗಿ ದುರ್ಬಲನಾಗಿದ್ದರೂ ಅಧಿಕಾರಕ್ಕಾಗುವ ಕಿತ್ತಾಟದಲ್ಲಿ ಕೇಂದ್ರವಾಗಿರುವ ಕೃಷಣಪ್ಪ ಪೋಪ್ ಕವಿಯ ಶಬ್ದಗಳಲ್ಲಿ "ವೈಭವೋಪೇತವಾದ ನಗೆಗೀಡಾದ–ಸಮಸ್ಯೆಯಾದ" ಜೀವನದ ಮಾರ್ಮಿಕ ಸಂಕೇತವಾಗುತ್ತಾನೆ. ಆದ್ದರಿಂದಲೇ ಕೃತಿಯ ಶಿಲ್ಪವೂ ಕಾಲ ಹಾಗೂ ತಾರ್ಕಿಕ ಸಂಬಂಧವುಳ್ಳ ನಿರೂಪಣಾಕ್ರಮವನ್ನು ವರ್ಜಿಸಿ ವರ್ತಮಾನ–ಭೂತ–ಭವಿಷ್ಯತ್ತುಗಳನ್ನು ಒಂದರೊಳಗೊಂದು ಹಣೆಯುತ್ತಾ, ಒಂದು ಪ್ರತಿಮೆಶಿಂದ ಮತ್ತೊಂದು ಪ್ರತಿಮೆಗೆ ಕೇವಲ ಭಾವನಾತ್ಮಕ ಸಂಬಂಧವಿರುವ "ಪ್ರತಿಮಾ ಕಾವ್ಯ"ದಂತೆ ಕಡೆಯಲ್ಲಿಟ್ಟಿದೆ.

ಈ ಕೃತಿಯಲ್ಲಿ ವಯಕ್ತಿಕ ಮತ್ತು ರಾಜಕೀಯ ಪಾತಳಿಗಳು ಪರಸ್ಪರ ಸಂಬಂಧಿಸಿವೆ ಎನ್ನುವುದಕ್ಕೆ ಕೃತಿಯ ಕೊನೆಯಲ್ಲಿ ಬರುವ ಕೃಷ್ಣಪ್ಪನ ಮಾತುಗಳನ್ನು ನಾವು ನೋಡಬಹುದು ತನ್ನಲ್ಲಿ ಭ್ರಮೆ, ಆತ್ಮಕತೆ ಮತ್ತು ರ್‍ಯಾಶನಲೈಜೇಶನ್‌ಗಳಿಂದ ಮುಕ್ತವಾದ ಕೃಷ್ಣಪ್ಪ ಗೌರಿಯೊಡನೆ ಹೀಗೆ ಹೇಳುತ್ತಾನೆ. "ಇನ್ನೂ ಎರಡು ಆಸೆಗಳು ನನಗಿವೆ. ಅಶ್ವತ್ಥದ ಮರದಬುಡದಲ್ಲಿ ಕೂತು ಕಾಲದ ನಿರಂತರತೆಯನ್ನ ಅನುಭವಿಸಬೇಕು ಅನ್ನಿಸುತ್ತೆ...... ಇನ್ನೊಂದು ಆಸೆ ಇದೆ. ಅದು ಇದು ಬೇರೆ – ಬೇರೆ ಅಂತ ನನಗೆ ಅನ್ನಿಸಿಲ್ಲ ............... ಯಾವತ್ತೂ ಚರಿತ್ರೇಲಿ ದಡ ಹತ್ತದೇನೇ ಇದ್ದಾರಲ್ಲ ಅವರಿಗೆ ಸಿಟ್ಟು ಬರೋ ಹಾಗೆ ಮಾಡಕ್ಕೆ ಸಾಧ್ಯವಾದರೆ ಆ ಸಿಟ್ಟು ಸಮಾಜದ ಕ್ಷುದ್ರತೇನ ಸುಟ್ಟೀತು ಅಲ್ವ?

"ಕೃಷ್ಣಪ್ಪ ಸಾಹಿತಿಯಾಗಲು ಪ್ರಯತ್ನಿಸಿ ಸೋತವ ಒಮ್ಮೆ ಬಿಳಿ ಕಾಗದದ ಮೇಲೆ ದುಂಡನೆಯ ಅಕ್ಷರದಲ್ಲಿ ಅರ್ಥವಾಕ್ಯವೊಂದನ್ನು ಬರೆದು ಅದನ್ನು ಮುಗಿಸಲಾರದೇ ಹೋಗೆದ್ದ- ಸುಗ್ಗಿಯ ಕಾಲದಲ್ಲಿ ಬೆಳಗಿನ ಹೊತ್ತು ಕರಿಯ ಎನ್ನುವ ಹೊಲೆಯನೊಬ್ಬ ತನ್ನ ತಲೆಯ ಮೇಲೆ ಹುಲ್ಲಿನ ಕುಕ್ಕೆ ಇಟ್ಟುಕೊಂಡು ಹೋಗುತ್ತಿದ್ದಾಗ" ಎಂದು ವಾಕ್ಯ ಕೊನೆಯಾಗದೆ ನಿಂತಿತ್ತು. ಹೀಗೆ ಹೋಗುತ್ತಿದ್ದಾಗ ಅವನಲ್ಲಿ ಲೋಕದ ಕೊಳಕನ್ನು ಸುಡಬಲ್ಲ ಬೆಂಕಿಯಂತ ಸಿಟ್ಟು ಹುಟ್ಟಿತೆಂದು ಬರಿಯುವುದು ಸಾಧ್ಯವೆ? ಸಾಧ್ಯವಾಗಲು ಒಂದು ನಿಜ ಜೀವನದಲ್ಲಿ ಅಂತ ಸಿಟ್ಟು ಹುಟ್ಟಿದ್ದರೆ ದಾಖಲೆ ಇರಬೇಕು ಅಥವಾ ಅಂತದ್ದು ಹುಟ್ಟುವುದು ನಿಜವೆಂದು ಅನ್ನಿಸುವಂತೆ ಮಾಡಬಲ್ಲ ವಾಕ್ಸಿದ್ಧಿ ತನಗೆ ಬೇಕು. ಕೈಸಾಗದೇ ಇರೋವರು ಮಾತಲ್ಲಿ ತೀಟೆ ತೀರಿಸಿಕೋತಾರೆ ಎಂದು ಕವಿಗಳನ್ನು ಅವನು ಜರೆಯುತ್ತಿದ್ದ ಇದರಲ್ಲಿ ಅಸೂಯೆ ಕಂಡ ಮಹೇಶ್ವರಯ್ಯ ಸುಡುವ ತಾಕತ್ತಿದ್ದರೆ ಸುಡಯ್ಯ. ವಾಗ್ದೇವಿಯನ್ನು ಜರೆಯಬೇಡ" ಎಂದಿದ್ದರು ಎಲ್ಲೆಲ್ಲೋ ಕೋಪವನ್ನು ಚೆಲ್ಲುವುದರ ಬದಲು ಅದನ್ನು ಮಾತಿನಲ್ಲೆ ಒಳಚಾಚಿದ ಬೆಂಕಿಯ ನಾಲಗೆ ಮಾಡಿ ಉರಿಸುವುದೇ ಶ್ರೇಷ್ಠವೆಂದು ಮಹೇಶ್ವರಯ್ಯನ ಅಭಿಪ್ರಾಯ. ಆದರೆ ಕೃಷ್ಣಪ್ಪನಿಗೆ ಗೊತ್ತು; ನನ್ನ ಮಾತುಗಳು ತನ್ನ ಗರ್ವಕ್ಕೆ ಅಂಟಿಕೊಂಡು ಬಿಡುತ್ತಿದ್ದವು, ಮೈತುಂಬ ಹೇಳುವ ಪಿತ್ಥಗಂಧೆಯಂತೆ ತನ್ನಿಂದ ಹೊರಬೀಳುತ್ತಿದ್ದವು."[೧]

ಕೃಷ್ಣಪ್ಪ ಪ್ರತಿನಿಧಿಸುವ ಸೋಷಲಿಸ್ಟ್ ಮಾರ್ಗದ, ವ್ಯವಸ್ಥೆಯೊಳಗಿದ್ದೆ ಅದನ್ನು ಬದಲಿಸಲು ಪ್ರಯತ್ನಿಸುವ ಮಾರ್ಗ ಒಂದೇ – ಆದರೆ ಆ ಮಾರ್ಗವೂ ಹೇಗೆ "ತೇಪೆ ಹಚ್ಚುವ" ಕೆಲಸವನ್ನು ಮಾಡುತ್ತದೆಂಬುದನ್ನು ಮತ್ತು ನೇರವಾಗಲ್ಲದಿದ್ದರೂ ಆ ವ್ಯವಸ್ಥೆಯನ್ನೇ ಮತ್ತು ಬಲಪಡಿಸುತ್ತದೆಂಬುದನ್ನು ಕೃಷ್ಣಪ್ಪನ ಅದಃಪತನ ಎತ್ತಿತೋರಿಸುತ್ತದೆ. ಕೃಷ್ಣಪ್ಪನು ತಂದ ಭೂಸುಧಾರಣೆಗಳಿಂದ ಮೊದಲು ಕೇವಲ ಶೋಷಣೆಯ ಏಜಂಟ್ ಆಗಿದ್ದ, ಮಗುವಿಗೆಂದಿದ್ದ ಹಾಲನ್ನು ತಿಪ್ಪೆಗೆ ಚೆಲ್ಲಿದ್ದ ನರಸಿಂಹ ಭಟ್ಟನೂ ಭೂ ಮಾಲೀಕನಾಗಿ ಶೋಷಕನೇ ಆಗುತ್ತಾನೆ. ಶೋಷಿತರಿಗೆ ತಾನು ಮುಖ್ಯಮಂತ್ರಿಯಾದರೆ ಏನಾದರೂ ದಾರಿತೋರಬಹುದೆಂದು ವಿಚಾರಿಸಿದರೆ, ಅದಕ್ಕಾಗಿ ವೀರಣ್ಣನು ತನ್ನ ಪಕ್ಷಕ್ಕೆ ಇತರರನ್ನು ಎಳೆದುಕೊಳ್ಳಲು ಲಕ್ಷಾಂತರ ಚೆಲ್ಲುವುದನ್ನು ಒಪ್ಪಿಕೊಳ್ಳಲಾಗುತ್ತದೆ ನಿರಪರಾಧಿ ಹುಡುಗಿಯ ಮೇಲೆ ಅತ್ಯಾಚಾರವಬಾಗಿ ಅವಳು ಸತ್ತದ್ದನ್ನು ಪ್ರತಿಭಟಿಸಿದರೆ ಸರ್ವಾಧಿಕಾರಿಯಾಗಲು ಪ್ರಯತ್ನಿಸುತ್ತಿರುವ ಪ್ರದಾನಿಯ ಪರವಾದ ನಾಯಕ ಚಂದ್ರಯ್ಯನ ಕೈಯನ್ನು ಬಲಪಡಿಸಿದ ಹಾಗಾದುತ್ತೆ ಆದ್ದರಿಂದ ಅತ್ಯಾಚಾರವಾಗಿದ್ದರೂ ಪ್ರತಿಭಟಿಸಕೂಡದು ಈ ರೀತಿ ಒಂದೊಂದಾಗಿ ವ್ಯವಸ್ಥೆಯೊಡನೆ ಒಪ್ಪಂದ ಮಾಡಿಕೊಳ್ಳುತ್ತಾ ಹೋದರೆ (ಕೃಷ್ಣಪ್ಪ ಚಿಕಿತ್ಸಗನುಕೂಲವಾಗುತ್ತದೆಂದು ಹೊಸ ಕಾರು ಪಡೆದಂತೆ, ತನ್ನ ಹೆಂಡತಿಗೆಂದು ಹೊಸ ಸೈಟ್

---

೧. ಅವಸ್ಥೆ – ಪುಟ – ೧೪–೧೫

ಒಪ್ಪಿಕೊಂಡಂತೆ) ಇನ್ನೂ ವ್ಯವಸ್ಥೆಯನ್ನು ಸುಧಾರಿಸುವುದು–ಬದಲಾಯಿಸುವುದು ಹೇಗೆ? ಈ ದ್ವಂದ್ವವನ್ನು ಕೃಷ್ಣಪ್ಪ ಅತ್ಯಂತ ನಿಷ್ಠುರತೆಯಿಂದ ನಾಗೇಶನೊಡನೆ ಹೇಳಿಕೊಳುತ್ತಾನೆ: "ನನ್ನ ಪ್ರಯತ್ನದಿಂದ ಅವತ್ತು ಒದಿಸಿಕೊಂಡಿದ್ದ ಬೀರೇಗೌಡ ಈವತ್ತು ಇನ್ನೊಬ್ಬನನ್ನು ಒದಿತಾನೆ. ಆದರೆ ಈ ಮಾತನ್ನು ಹೇಳೋವಾಗ ಸಮಾಜ ಚಲಿಸುವುದಿಲ್ಲ. ಏನೋ ಅರ್ಥವಿಲ್ಲನ್ನೋ ಧ್ವನಿ ಹೊರಟರೆ ಅದು ಕೂಡ ಬಹಳ ಸುಲಭವಾದ ಸಲೀಸಾದ ಮಾತಾಗಿ ಬಿಡುತ್ತೆ. ಏನನ್ನು ಮಾಡಲಾರದ ಮುಟ್ಠಾಳನ್ನೂ ಏನೂ ಮಾಡಕೂಡದು ಅಂತ ವ್ಯವಸ್ಥೇನ್ನ ಕಾಪಾಡೋ ಕ್ರೂರಿಯೂ ಇದೇ ಮಾತಾಡ್ತಾನೆ ಅಲ್ವ? ಅಂದ್ರೆ ನಾನು ಹೇಳಬೇಕಂತಿರೋದು ನಾಗೇಶ........." ವಾಕ್ಯವನ್ನು ಮುಗಿಸಲಾಗದೆ ಕೃಷ್ಣಪ್ಪ ನಿಲ್ಲಿಸುತ್ತಾನೆ. ಅಂತೆಯೇ ಈ ದ್ವಂದ್ವದಿಂದ ಪಾರಾಗಲು ಸಕ್ರಿಯ ರಾಜಕಾರಣಕ್ಕೆ ರಾಜಿನಾಮೆ ಕೊಟ್ಟು ತನ್ನ ಹಳ್ಳಿಗೆ ಒಂದಿರುಗಿ "ದಡ ಹತ್ತದವರಿಗೆ ಸಿಟ್ಟು ಬರೋ ಹಾಗೆ" ಪ್ರಯತ್ನಿಸಲು ನಿರ್ಧರಿಸುತ್ತಾನೆ.

ಕೃಷ್ಣಪ್ಪ ಮತ್ತು ನಾಗರಾಜರ ಭೇಟಿಯಲ್ಲಾಗುವ ಹಲವಾರು ಸಂಭಾಷಣೆಗಳು ಕೃಷ್ಣಪ್ಪನನ್ನು ಒಬ್ಬ ಅಸ್ಥಿತ್ವವಾದಿಯಾಗಿಯೂ, ನಾಗರಾಜನನ್ನು ಒಬ್ಬ ಸ್ಟ್ರಕ್ಚರಲಿಸ್ಟ್ ಆಗಿಯೂ ತೋರಿಸಬಹುದು ವ್ಯಕ್ತಿವಾದಿಯಾದ ಕೃಷ್ಣಪ್ಪ ಸಮಸ್ಯೆಗಳನ್ನು ಅಸ್ಥಿತ್ವವಾದಿ ಸಿದ್ಧಾಂತಗಳ ಬೆಳಕಿನಲ್ಲಿಟ್ಟು ನೋಡುತ್ತಾನೆ.

ಕಾದಂಬರಿಯ ಅಂತ್ಯದಲ್ಲೂ ನಾವು ಕಾಣುವುದು ತನ್ನವೇ ಆದ ಅಸ್ಥಿತ್ವವನ್ನು ಗುರುತಿಸಿಕೊಳ್ಳಲಾಗದ ದ್ವಂದ್ವ ಮನಸ್ಥಿತಿಯನ್ನು ಹೊಂದಿದ್ದ ಕೃಷ್ಣಪ್ಪನನ್ನೆ ಕೃಷ್ಣಪ್ಪ ಏಕಕಾಲಕ್ಕೆ ಕ್ರಾಂತಿಕಾರನಾಗಿಯೂ, ಕ್ರಾಂತಿಗೆ ವಿರುದ್ಧವಾದವನಾಗಿಯೂ ಇರುತ್ತಾನೆ. ಆದರೆ. ಯಾವುದರಲ್ಲೂ ಪೂರ್ಣವಾಗಿ ಇರುವವನಲ್ಲ. ಈ ಮಾದರಿಯಲ್ಲೇ ಈ ಕಾದಂಬರಿಯ ಉಳಿದ ಪಾತ್ರಗಳು ಇವೆ–ಕೃಷ್ಣಪ್ಪ ಕೃತಿಯಲ್ಲಿ ಕೇಂದ್ರ ಪಾತ್ರವಾಗಿದ್ದರೂ ಆ ಪಾತ್ರದ ಸುತ್ತಲೂ ವಿವಿಧ ಕೋನಗಳಲ್ಲಿ ಉಳಿದ ಪಾತ್ರಗಳ ಸಂಬಂಧ ಹೊಂದಿದೆ ಹಾಗಾಗಿ ಈಗ ಅವುಗಳನ್ನು ನೋಡೋಣ.

**ಮಹೇಶ್ವರಯ್ಯ** : ಮಹೇಶ್ವರಯ್ಯ ಕಥೆಯ ಪ್ರಾರಂಭದಲ್ಲಿ ಬರುವ ಪಾತ್ರ ಈತ ಕೃಷ್ಣಪ್ಪನನ್ನು ಸ್ಕೂಲಿಗೆ ಸೇರಿಸಿ ವಿದ್ಯಾಭ್ಯಾಸ ಮಾಡಿಸುತ್ತಾರೆ. ಮಹೇಶ್ವರಯ್ಯ ಯಾರೊ ಎತ್ತ ಕಡೆಯವರೋ ತಿಳಿಯದು ಯಾವುದೋ ಊರಿಗೆ ಬರುತ್ತಾರೆ ಅನ್ನಿ ಮನೆಗಿನೆ ಹೊರಣ ಮಾಡಿಕೊತಾರೆ. ಇರುವುದು ಒಬ್ಬರೇ ಆದರೂ. ಅಡಿಗೆಯವನನ್ನು ಇಟ್ಟುಕೊಳ್ಳುತ್ತಾರೆ. ತನ್ನ ಬಟ್ಟೆಯನ್ನು ತಾನೇ ಒಗೆದುಕೊಳ್ಳುತ್ತಾನೆ. ಅವರ ಬಾಯಿಂದ ಕಾಳಿದಾಸನ ಸಂಸ್ಕೃತ ಕೇಳಬೇಕು. ಹಿಂದೂಸ್ತಾನ ಗಾಯನ ಕೇಳಬೇಕು. ದೊಡ್ಡ ರಸಿಕ ತಾಂಬೂಲದಿಂದ ಕೆಂಪಾದ ಅವರ ತುಟಿಗಳ ಮೇಲಿನ ಗಿರಿಜಾ ಮೀಸೆ, ಅವರ ಕಿವಿಯಲ್ಲಿನ ಹೊಳೆಯುವ ವಜ್ರದ

ಒಂಟಿಗಳು, ಅವರ ಮುಚ್ಚುಕೊಟು, ಶುಭ್ರವಾದ ಕಚ್ಚೆ ಹಾಕಿದ ಪಂಚೆ, ಅವರು ಹಿಡಿದ ಬೆಳ್ಳಿ ಕಟ್ಟಿದ ಬೆತ್ತ, ಅವರು ದೊಡ್ಡ ವಿರಾಗಿಗಳು ಎಂದು ಕೃಷ್ಣಪ್ಪ ಹೇಳುತ್ತಾನೆ. ಅವರು ಸ್ಪಷ್ಟ ಹೇಳಿಕೊಂಡಿರದಿದ್ದರೂ ಕೃಷ್ಣಪ್ಪನ ಊಹೆ ಅವರ ಹೆಂಡತಿ ಯಾರನ್ನೋ ಇಟ್ಟುಕೊಂಡಿದ್ದು ತಿಳಿದು ಮಹೇಶ್ವರಯ್ಯ ಮನೆ ಬಿಟ್ಟದ್ದು ಎಂದು ಲಕ್ಷಾಧೀಶ ಮನುಷ್ಯ ಹೆಂಡತಿಗಷ್ಟು ಆಸ್ತಿ ಬಿಟ್ಟು ಉಳಿದ ಹಣ ಬ್ಯಾಂಕಲ್ಲಿಟ್ಟು ಹೀಗೆ ನಿವೃತ್ತರಾಗಿ ಊರೂರು ಅಲೆಯುತ್ತಿದ್ದರು. ಯಾವಾಗಲೂ ಓದುತ್ತಿರುತ್ತಿದ್ದರು. ಆತ ತ್ರಿಕಾಲ ಜ್ಞಾನಿಯೆಂದು ಕೃಷ್ಣಪ್ಪನ ನಂಬಿಕೆ ಮಹೇಶ್ವರಯ್ಯ ಎಲ್ಲಾದರೂ ಬಂದರು ಎನ್ನಿ ಬಂದು ಕೂತವರು ಇದ್ದಕ್ಕಿದ್ದಂತೆ "ಭೋ" ಎನ್ನುವುದುಂಟು. ಆಗ ಅವರ ಮುಖದಲ್ಲಿ ಕಳವಳ ಕಾಣಿಸಿಕೊಳ್ಳುತ್ತದೆ. ಅವರನ್ನು ಕರೆದವರು ಎಷ್ಟು ಒತ್ತಾಯ ಮಾಡಿದರೂ ಹೇಳುವುದಿಲ್ಲ ಮುಂದಾಗುವ. ಅನಿಷ್ಟ ಅವರಿಗೆ ಗೊತ್ತಾಗಿರುತ್ತದೆ. ಅದನ್ನು ಆಮೇಲೆ ಕಿವಿಯಲ್ಲಿ ಮಹೇಶ್ವರಯ್ಯನ ದುರಂತವೆಂದರೆ ಅವರಿಗೆ ಭವಿಷ್ಯದಲ್ಲಿ ಒಳ್ಳೆಯದು ಕಾಣುತ್ತಿದ್ದುದ್ದೇ ತೀರ ಅಪರೂಪ. ಕೃಷ್ಣಪ್ಪನ ಬಗ್ಗೆ ಮಾತ್ರ ಅವರು ಒಮ್ಮೆ ಒಳ್ಳೆಯದನ್ನು ಕಂಡದ್ದುಂಟು "ಎಂಥ ಮುಟ್ಠಾಳ ಜನ ನೀವು ಮನೆಯಲ್ಲಿರುವ ಮಾಣಿಕ್ಯ ನಿಮ್ಮ ಕಣ್ಣಿಗೆ ಬೀಳದೇ ಹೋಯಿತಲ್ಲ"[1] ಎಂದು ಕೃಷ್ಣಪ್ಪನ ಮನೆಯವರಿಗೆ ಹೇಳಿ ಅವರಿಗೆ ದುಡ್ಡು ಕೊಟ್ಟು ಸ್ಕೂಲಿಗೆ ಸೇರಿಸಿದರು. ಹಣದ ವ್ಯವಸ್ಥೆ ಮಾಡಿ ಕಣ್ಮರೆಯಾದರು ವರ್ಷಕ್ಕೊಮ್ಮೆ ನೋಡುತ್ತಿದ್ದರು.

ಮಹೇಶ್ವರಯ್ಯ ಕೃಷ್ಣಪ್ಪನ ಒಂದು ಸಾಧ್ಯತೆ ರಾಜಕೀಯದಲ್ಲಿ ಯಾವಾಗಲೂ ಅವಡುಗಚ್ಚಿಕೊಂಡೇ ಬದುಕಬೇಕಾದ ಅವನಿಗೆ, ಸಮಾಜಕ್ಕೆ ತನ್ನನ್ನು ಒಡ್ಡಿಕೊಳ್ಳದ ಮಹೇಶ್ವರಯ್ಯನಂಥ ಆತ್ಮರಾಮರ ಬದುಕು ಮೆಚ್ಚುಗೆಯಾಗಿತ್ತು. ಅವರ ವಿಚಿತ್ರ ಖಯಾಲಿಗಳ ಮಧ್ಯೆಯೂ ಮಹೇಶ್ವರಯ್ಯನಿಗೆ ಒಂದು ತರದ ನಿರ್ಲಿಪ್ತತೆ ಸಾಧ್ಯವಿತ್ತು. ದೈನಿಕವನ್ನು ತಿರಸ್ಕರಿಸದೆ ಅದನ್ನು ಮೀರುವ ಸಾಧ್ಯತೆ ಅವರಿಗೆ ತಿಳಿದಂತ್ತಿತ್ತು. ಕೃಷ್ಣಪ್ಪನನ್ನು ಒಮ್ಮೆ "ಕೃಷ್ಣಪ್ಪ ಇದು ಬಹಳ ಕಾಲ ಉಳಿಯಲ್ಲೊ–ನಿನಗೆ ಮತ್ತೆ ಅಶ್ವತ್ಥ ಮರದ ಕೆಳಗೆ ಧನಗಳನ್ನು ಕಾಯುತ್ತ ಕೂರಬೇಕೆನ್ನಿಸುತ್ತೋ" ಎಂದು ಎಚ್ಚರಿಸಿದರು. ವಾರಂಗಲ್ ಪೋಲಿಸ್ ಸ್ಟೇಷನ್ನಲ್ಲಿ ಬಂಧಿಯಾಗಿದ್ದ ಕೃಷ್ಣಪ್ಪನನ್ನು ಬಿಡುಗಡೆಗೊಳಿಸಲು ಮಹೇಶ್ವರಯ್ಯನು ಬಹಳ ಕಷ್ಟಪಟ್ಟಿದ್ದರು ಗೃಹ ಮಂತ್ರಿಯವರಿಗೆ ಬಹಳ ಆಪ್ತನಾಗಿದ್ದ ಕವಿ ಅವಧಾನಿಯವರಿಗೆ ಒಂದು ದೊಡ್ಡ ಬಾಟಲು ವಿಸ್ಕಿ ನೀಡಿ ತಾನು ಕರ್ನಾಟಕದಲ್ಲಿ ಅವಧಾನಿಯವರ ಅಭಿಮಾನಿಯೆಂದು ಹೇಳಿ ಅವರ ಅಭಿಮಾನವನ್ನು ಸಂಪಾದಿಸಿ ನಂತರ ಕೃಷ್ಣಪ್ಪನ ವಿಷಯವನ್ನು ತಿಳಿಸಿ ಅವರ ಸಹಾಯದಿಂದ ಕೃಷ್ಣಪ್ಪನನ್ನು ಬಿಡುಗಡೆ ಮಾಡಿಸುತ್ತಾರೆ. ಇದು ಪ್ರಕ್ಷುಬ್ಧ ಸ್ವಪ್ನ ಲೋಕದ ಅಸಂಗತಿಯಂತೆ ಕಂಡುಬರುತ್ತದೆ. ಕೃಷ್ಣಪ್ಪನಿಗೆ ಏನಾದರೂ ತೊಂದರೆ ಉಂಟಾದ ತಕ್ಷಣದಲ್ಲಿ ಮಹೇಶ್ವರಯ್ಯ ಪ್ರತ್ಯಕ್ಷವಾಗಿಬಿಡುತ್ತಿದ್ದರು ಮತ್ತು ಆತನಿಗೆ ಸಹಾಯ ಮಾಡುತಿದ್ದರು.

---

೧ – ಅವಸ್ಥೆ – ಪುಟ – ೧೨

'ನಿನ್ನೊಳಗೊಂದು ಹುಲಿಯಿದೆಯೊ' ಎಂದು ಮಹೇಶ್ವರಯ್ಯ ಹೇಳುತ್ತಿದ್ದರಂತೆ. ಮಹೇಶ್ವರಯ್ಯ ದುರ್ಗಿಯ ಭಕ್ತ ಯಾವಾಗಾದರೊಮ್ಮೆ ಇದ್ದಕ್ಕಿದ್ದಂತೆ ಯಾರೂ ತನ್ನನ್ನು ತಿಳಿಯದ ಜಾಗ ಹುಡುಕಿ ದುರ್ಗಿಯ ಆರಾಧನೆಗೆ ತೊಡಗಿ ಬಿಡುವರು. ಹಗಲು ರಾತ್ರೆ ನಡೆಯುವ ಈ ಆರಾಧನೆ ಕೃಷ್ಣಪ್ಪನ ಸಮ್ಮುಖದಲ್ಲಿ ನಡೆದಿದೆ. 'ಹುಲಿಯನ್ನು ಸವಾರಿ ಮಾಡಬೇಕೊ' ಎಂದು ಮಹೇಶ್ವರಯ್ಯ ಕೃಷ್ಣಪ್ಪನಿಗೆ ಆಪ್ತವಾಗಿ ಹೇಳಿದ್ದಾರೆ. ಕೃಷ್ಣಪ್ಪ ಇವರನ್ನು ಸಂಶಯವಾಗಿ ನೋಡಲು ಪ್ರಯತ್ನ ಪಟ್ಟಿದ್ದ. ಅವನಿಗೆ ದೇವರ ಪೂಜೆಯೂ ಸಾಧ್ಯವಿರಲಿಲ್ಲ. ತನ್ನ ಮುಖವಾಡವನ್ನು ಮುಖವೇ ಮಾಡಬಲ್ಲ ಮಹೇಶ್ವರಯ್ಯನ ನುಚ್ಚುಗೆಯೂ ಕೃಷ್ಣಪ್ಪನಿಗೆ ಬೇಕಿತ್ತಲ್ಲವೆ? ಆದ್ದರಿಂದ ದಿವ್ಯವಾದ್ದೊಂದು ತನ್ನನ್ನು ಹೊಗುವುದಕ್ಕಾಗಿ ಸಂಶಯವನ್ನೂ ಮೀರಿ ಏಕಾಗ್ರನಾಗಿ ಕೂತು ಅವರ ಮಾತು ಕೇಳಿಕೊಳ್ಳುತ್ತಿದ್ದ. ಕೃಷ್ಣಪ್ಪನನ್ನು ಬದಲಿಸುತ್ತ ಬೆಳೆಸಲು ಮಹೇಶ್ವರಯ್ಯ ಅವನನ್ನು ಹೀಯಾಳಿಸಿದ್ದೂ ಇಲ್ಲವೆಂದಲ್ಲ. ಸದಾ ಕನ್ನಡಿಯ ಎದುರು ನಿಂತು ತಲೆ ಬಾಚುತ್ತಲೋ ಇರುತ್ತಿದ್ದ ಕೃಷ್ಣಪ್ಪನ ಆತ್ಮರತಿಯನ್ನು ಹೀಗೆ ಜರಿದು ಅವರು ಜಿಡಿಸಿದ್ದು'.[೧]

**ಬೈರಾಗಿ:** ಮಹೇಶ್ವರಯ್ಯನಂತೆಯೇ ಉಳಿದ ಪ್ರತಿಯೊಂದು ಪಾತ್ರದ ಅವಸ್ಥೆಯೊ ಪರಸ್ಪರ ವಿರೋಧ ಗುಣಗಳಿಂದ ಕೂಡಿರುವುದೇ ಸರ್ವಸಂಗ ಪರಿತ್ಯಾಗಿಯಾದ ಬೈರಾಗಿಯ ಪಾತ್ರವು ಅಷ್ಟೆ. ಊರಿನ ಹತ್ತಿರವಿದ್ದ ಗುಡ್ಡದ ಮೇಲೊಂದು ಗುಹೆಯಿತ್ತು. ಈ ಗುಹೆಯಲ್ಲಿ ಬರೀ ಕೌಪೀನಧಾರಿಯದ ಉದ್ದಗಡ್ಡವನ್ನು ಬಿಟ್ಟು ಮುದುಕ ಬೈರಾಗಿಯೊಬ್ಬನಿದ್ದ. ಅವನ ಹೆಸರೇನು ಯಾರಿಗೂ ತಿಳಿಯದು. ಯಾರ ಹತ್ತಿರವೂ ಅವನು ಮಾತಾಡುತ್ತಿರಲಿಲ್ಲ. ಪ್ರತಿ ಬೆಳಿಗ್ಗೆ ಅವನು ಗುಡ್ಡ ಇಳಿದು ಊರಿಗೆ ಬರುತ್ತಿದ್ದ. ದಿನಕ್ಕೊಂದು ಬೀದಿಯನ್ನು ಆರಿಸಿಕೊಂಡು ಬೀದಿಯ ತುದಿಯಲ್ಲಿ ನಿಂತು ಗಟ್ಟಿಯಾಗಿ ರಾಗವಾಗಿ ಭಗವದ್ಗೀತೆಯ ಅಧ್ಯಾಯಗಳನ್ನು ಒಂದು ಗಂಟೆಕಾಲ ಹಾಡುತ್ತಿದ್ದ. ಅವನು ನೆಲದ ಮೇಲಿಟ್ಟ ಬುಟ್ಟಿಯಲ್ಲಿ ದಾರಿಹೋಕರು ಅಕ್ಕಿಯನ್ನೋ, ಬೇಳೆಯನ್ನೋ, ಹಣ್ಣನ್ನೋ ಹಾಕುತ್ತಿದ್ದರು. ಈ ಸಣ್ಣ ಬುಟ್ಟಿತುಂಬಿದ ಮೇಲೆ ಬೈರಾಗಿ ಏನನ್ನೂ ಸ್ವಿಕರಿಸುತ್ತಿರಲಿಲ್ಲ. ತನ್ನ ಪಠನ ಮುಗಿಸಿ ಬೆಟ್ಟಕ್ಕೆ ಹಿಂದಿರುಗಿ ಅದನ್ನು ಬೇಯಿಸಿ ತಿಂದುಬಿಡುತಿದ್ದ ಅಷ್ಟೆ. ಈ ಬೈರಾಗಿಯೇ ಮುಂದೆ ಸರ್ಪಸಿದ್ದೇಶ್ವರನೆಂದು ಪ್ರಸಿದ್ಧನಾಗಿ 'ಮೈಕೈ ತುಂಬಿಕೊಳ್ಳುತ್ತ' ಜನರು ತನಗೆ ಸಲ್ಲಿಸುವ ಪೂಜೆ–ಪುರಸ್ಕಾರಗಳನ್ನು ತನ್ನ ಸುತ್ತಲೂ ಬೆಳೆಯುತ್ತಿರುವ ಅಂಧ ಶ್ರದ್ದೆಯನ್ನು ಒಪ್ಪಿಕೊಳ್ಳುವ ಹುಚ್ಚನೂ, ದ್ರಾಷ್ಟಾರನೂ ಆಗುತ್ತಾನೆ. ಬೈರಾಗಿಯೂ ಕೃಷ್ಣಪ್ಪ ತನ್ನ ಜೀವನದ ಉದ್ದೇಶವನ್ನು ಕಂಡುಕೊಳ್ಳುವುದರಲ್ಲಿ ನೆರವಾಗುತ್ತಾನೆ. "ಕಣ್ಣು, ಕಿವಿ, ಮೂಗು, ಚರ್ಮಗಳನ್ನು ಹೊರಗನ್ನು ಒಳಗೆ ಬಿಡುತ್ತಾಲೇ ಇರುತ್ತದಲ್ಲವೆ? ಹೊರಗನ್ನೂ ಒಳಗನ್ನೂ ಇನ್ನಷ್ಟು ಆಪ್ತವಾಗಿ ವಿಶ್ವಯೋನಿಗಳು ಬಿಗಿಯುತ್ತವಲ್ಲವೆ? ಈ ಸತ್ವ ಬಿಟ್ಟು ಬೇರೇನನ್ನು ಈ ಗೋಸಾಯಿ ಸ್ವಯಂಪೂರ್ಣತೆಯನ್ನು ಆರೋಪಿಸಿ

---

೧. ಅವಸ್ಥೆ – ಪುಟ – ೧೪

ಅಸೂಯೆ ಪಡುತ್ತಾನೆ. ಆದರೆ ನಾಯಿಯು ಗುಹೆಯಲ್ಲಿಯ ಸರ್ಪದೊಂದಿಗೆ ಹೋರಡುವ ಸಂದರ್ಭದಲ್ಲಿ ಭೈರಾಗಿಯ ಸ್ವಯಂ ಪೂರ್ಣತೆಯ ಬಿರುಕುಗಳನ್ನು ಕಂಡು ಅವನಿಗೆ ಸ್ವಯಂ ಪೂರ್ಣತೆಯ ಬಗ್ಗೆ ಬಲವಾದ ಅನುಮಾನ ಉಂಟಾಗುತ್ತದೆ. ಆ ಬೈರಾಗಿಯಂತೆ ಪ್ರಯತ್ನಪೂರ್ವಕವಾಗಿ ಒಣಗುವುದು ತನ್ನ ಮಾರ್ಗವಲ್ಲ". ಎನ್ನುವ ನಿರ್ಧಾರಕ್ಕೆ ಅವನು ಬರುತ್ತಾನೆ. ಮುಂದೆ ಈ ಬೈರಾಗಿಯೇ ಸರ್ಪ ಸಿದ್ದೇಶ್ವರನೆಂದು ಪ್ರಸಿಧ್ಧಿಯನ್ನು ಪಡೆಯುತ್ತಾನೆ.

**ಅಣ್ಣಾಜಿ:** ಅಣ್ಣಾಜಿ ನಡು ವಯಸ್ಸಿನ ಆಕರ್ಷಕ ವ್ಯಕ್ತಿ. ಎದ್ದು ಕಾಣುವ ಚೂಪಾದ ಗಲ್ಲ-ಮೂಗು. ಉಬ್ಬುಗಳು-ತೆಳ್ಳಗೆ ಎತ್ತರವಾಗಿದ್ದ ಕೂದಲನ್ನು ಉದ್ದವಾಗಿ ಹಿಂದಕ್ಕೆ ಬಾಚಿದ್ದ. ಅವನು ಗಡ್ಡ ಬೆಳೆಸುತ್ತಿದ್ದನೆಂಬುದು ಮುಖದ ಮೇಲೆ ಬೆಳೆದಿದ್ದ ಒಂದು ತಿಂಗಳಿನ ಕೂದಲಿನಿಂದ ತಿಳಿಯಬಹುದಿತ್ತು. ಪೋಲೀಸರಿಂದ ತಲೆಮರೆಸಿಕೊಂಡು ಇರುತ್ತಿದ್ದ. ಗೋವಾದ ಪೋರ್ಚುಗೀಸ್ ಜೈಲಿನಿಂದ ತಪ್ಪಿಸಿಕೊಂಡು ಬಂದ ಅಣ್ಣಾಜಿ ಮಹಾರಾಷ್ಟ್ರದವನು. ಗೋವಾದಿಂದ ತೆಲಂಗಾಣ ಪ್ರದೇಶಕ್ಕೆ ಹೋಗಿ ಅಲ್ಲಿ ಹಳ್ಳಿಯೊಂದರಲ್ಲಿ ರೈತ ಸಂಘಟನೆ ಮಾಡುತ್ತಿದ್ದಾಗ ಜಮೀಂದಾರನೊಬ್ಬನನ್ನು ಇವನ ಅನುಯಾಯಿಗಳು ಕೊಲ್ಲಲು ಪ್ರಯತ್ನಿಸಿದ್ದರು. ಜಮೀಂದಾರ ಕಾಲು ಮುರಿದುಕೊಂಡು ಬದುಕಿಕೊಂಡ. ಅಣ್ಣಾಜಿಯ ಯೋಜನೆಗೆ ಮೀರಿ ರೈತರಲ್ಲಿ ಕೆಲವರು ಮುಂದುವರೆದಿದ್ದರು. ಸಿಕ್ಕಿಬಿದ್ದ ರೈತರ ಮೇಲೆ ಕೊಲೆಯತ್ನದ ಆಪಾದನೆಯ ವಿಚಾರಣೆ ನಡೆಯುತ್ತಿತ್ತು. ಒಬ್ಬ ಆಪಾದಿತ ರೈತನನ್ನು ಅಪ್ರೂವರ್ ಮಾಡಿಕೊಂಡು ಅಣ್ಣಾಜಿಯ ಬಗ್ಗೆ ಪೋಲಿಸರು ವಿಷಯ ಸಂಗ್ರಹಿಸಿದ್ದರು. ಅಣ್ಣಾಜಿ ಊರಿಂದ ಊರಿಗೆ ತಪ್ಪಿಸಿಕೊಂಡು ತಿರುಗುತ್ತ ಈ ಊರಿಗೆ ಬಂದಿದ್ದ ಇಂಗ್ಲೀಷ್ ಪಾಠ ಹೇಳಿಕೊಡುತ್ತೇನೆಂದು ನಾಲ್ಕೈದು ಮನೆಗಳಲ್ಲಿ ಟ್ಯೂಶನ್ ಇಟ್ಟುಕೊಂಟದ್ದ. ಆಂಧ್ರ ಪೋಲಿಸರು ಆರ್.ಎಲ್. ನಾಯಕ್ ಎಂಬ ಹೆಸರಲ್ಲಿ ಇವನನ್ನು ಹುಡುಕುತ್ತಿದ್ದರು. ಗೋವಾದ ಪೋರ್ಚುಗೀಸರು ಟಿ.ಪಿ. ನಾಯಕ್ ಎಂಬ ಹೆಸರಿನಲ್ಲಿ ಇವನನ್ನು ಹುಡುಕುತ್ತಿದ್ದರು. ಗೋವಾದ ಪಿ.ಟಿ. ದೇಶಪಾಂಡೆ ಎಂಬ ಹೆಸರಿನ ಇವನನ್ನು ಗಲ್ಲಿಗೆ ಏರಿಸಲೂ ಸಿದ್ದರಾಗಿ ಕಾಯುತ್ತಿದ್ದರು. ತನ್ನ ಜೀವನಕ್ಕೊಂದು ಉದ್ದೇಶ ಹುಡುಕುತ್ತಿದ್ದ ಕೃಷ್ಣಪ್ಪನಿಗೆ ನೂರಾರು ಕ್ರಾಂತಿಕಾರಕ ಪುಸ್ತಕಗಳನ್ನು ಓದಿದ್ದ ಅಣ್ಣಾಜಿ ಮಹೇಶ್ವರಯ್ಯನಂತೆಯೇ ಗುರುವಾಗಿ ಕಂಡಿದ್ದ ಎಂದು ಹೇಳಬಹುದು.

ಅಣ್ಣಾಜಿಗೆ ಅವನು ಬಿಟ್ಟು ಬಂದ ಊರಲ್ಲೆಲ್ಲ ಒಬ್ಬೊಬ್ಬ ಪ್ರೇಯಸಿ. ಪ್ರತಿ ತಿಂಗಳೂ ಅವರಿಗೆಲ್ಲ ಅಷ್ಟಿಷ್ಟು ಹಣ ಅವನು ಕಳಿಸಬೇಕು. ಹೀಗಾಗಿ ಹುಲಿಯ ಹುಣ್ಣಿನಂತೆ ಅವನ ಸಾಲ. ಕೃಷ್ಣಪ್ಪನೇ ಮನಿಯಾರ್ಡರ್ ಮಾಡುವುದು. ಕೊಲ್ಲಾಪುರದಲ್ಲಿ ದರ್ಜಿಯ ಮಗಳೊಬ್ಬಳಿಗೆ ಅವಳ ಜಿ.ಟಿ. ವಿದ್ಯಾಭ್ಯಾಸಕ್ಕಾಗಿ

ತಿಂಗಳಿಗೆ ಇಪ್ಪತ್ತೈದು, ಗೋವಾದಲ್ಲಿ ಇವನಿಂದ ಮಗುವನ್ನು ಪಡೆದ ಗುಮಾಸ್ತೆಯೊಬ್ಬಳಿಗೆ ಇಪ್ಪತ್ತೈದು, ಚಿಕ್ಕ ವಯಸ್ಸಿನಲ್ಲೇ ಇವನನ್ನು ಮದುವೆಯಾಗಿ ಒಂದು ಗಂಡು ಮಗು ಹೆತ್ತು ತಾಯಿಯ ಮನೆ ಸೇರಿ ನಾಗಾಪುರದಲ್ಲಿದ್ದ ಖಾಸ ಹೆಂಡತಿಗೆ ಇಪ್ಪತ್ತೈದು. ಹದಿನೈದು ವರ್ಷಗಳಿಂದಾದರೂ ಇದಕ್ಕಾಗಿ ಇವನಿಗೆ ಸಾಲ ಕೊಟ್ಟ ಇವನ ಆ ಬಡ ಅನುಯಾಯಿಗಳಿಗೆ ಆಗೀಗ ತೀರಿಸಲು ಇನ್ನಷ್ಟು-ಹೀಗೆ ಮೈಯೆಲ್ಲ ಸಾಲ ಅಣ್ಣಾಜಿ ಬರೀ ಚಹಾ ಸಿಗರೇಟಲ್ಲೇ ಬದುಕುತ್ತ, ಈಚಲು ಚಾಪೆ ಮೇಲೆ ಮಲಗಿ ನಿದ್ರಿಸಬಲ್ಲ ಅಣ್ಣಾಜಿಗೆ ಇನ್ನು ಯಾವ ದುಷ್ಚಟವೂ ಇರಲಿಲ್ಲ.

ಮುಂದೆ ಮಾರ್ಕ್ಸಿಸ್ಟ್ ಕ್ರಾಂತಿಕಾರಿ ಅಣ್ಣಾಜಿಯು ಎಂ.ಎಲ್.ಎ. ಚೆನ್ನವೀರಯ್ಯನಿಗೆ ಇಂಗ್ಲೀಷ್ ಹೇಳಿಕೊಡುವ, ರೋಟರಿ ಕ್ಲಬ್ನಲ್ಲಿ ಮಾರ್ಕ್ಸವಾದದ ಚಾರಿತ್ರಿಕ ಸಿದ್ಧಾಂತವನ್ನು ವಿವರಿಸುವ, ಚೆನ್ನವೀರಯ್ಯನ ಹೆಂಡತಿ ಉಮೆಯೊಡನೆ ರಹಸ್ಯ ಸಂಬಂಧ ಬೆಳೆಸುವ ವ್ಯಕ್ತಿಯಾಗಿದ್ದಾನೆ. ಒಂದು ದಿನ ಇದ್ದಕ್ಕಿದ್ದಂತೆ ಪೋಲೀಸರು ಚೆನ್ನವೀರಯ್ಯನ ಮನೆಗೆ ಒಂದು ಅಣ್ಣಾಜಿಯನ್ನು ಅರೆಸ್ಟ್ ಮಾಡಿ ವಾರಂಗಲ್ಗೆ ಕರೆದೊಯ್ದು ಅಲ್ಲಿ ಆತನನ್ನು ಕೊಂದಿದ್ದರು. ಆದರೆ ಪತ್ರಿಕೆಯಲ್ಲಿ ಕರ್ನಾಟಕದಿಂದ ಆತನನ್ನು ಕರೆತರುತ್ತಿದ್ದಾಗ ಒಂದು ಅರಣ್ಯದ ಮಧ್ಯ ಅವನ ಕೆಲವು ಹಿಂಬಾಲಕರು ಜೀಪನ್ನು ಅಟ್ಯಾಕ್ ಮಡಿದುದಾಗಿಯೂ ಈ ಎನ್ಕೌಂಟರ್ನಲ್ಲಿ ಆರ್.ಎಲ್. ಸ್ವಾಮಿ ಅಲಿಯಾಸ್ ಅಣ್ಣಾಜಿ ಸುತ್ತುದಾಗಿಯೂ ಪೋಲಿಸ್ ಹೇಳಿಕೆ ವರದಿಯಾಗಿತ್ತು. ಮಾರ್ಕ್ಸ್‌ವಾದದ ಚಾರಿತ್ರಿಕ ಸಿದ್ದಾಂತದ ಬಗ್ಗೆ ಮಾತನಾಡುತ್ತಿದ್ದ ಫ್ರೆಂಚ್ ಕ್ರಾಂತಿಯ ಕಥೆಯನ್ನು ರಮ್ಯವಾಗಿ ಸಿನಿಮಾದಲ್ಲಿ ಕಣ್ಣಿಗೆ ಕಟ್ಟುವಂತೆ ಹೇಳುತ್ತಿದ್ದ.

ಮಾರ್ಕ್ಸ್ ಲೆನಿನ್ ವಾದಗಳ ಅತ್ಯಂತ ಸೂಕ್ಷ್ಮ ಸಮಸ್ಯೆಗಳ ಬಗ್ಗೆ ಮಾತನಾಡುತ್ತಿದ್ದ ಮಾರ್ಕ್ಸಿಸ್ಟ್ ಕ್ರಾಂತಿಕಾರಿ ಅಣ್ಣಾಜಿಯು ಹೀಗೆ ಅಂತ್ಯ ಹೊಂದುತ್ತಾನೆ. ಆದರೆ ಈತನು ಕೃಷ್ಣಪ್ಪನ ಮೇಲೆ ಅತ್ಯಂತ ಪ್ರಭಾವ ಬೀರಿದ ವ್ಯಕ್ತಿಯಾಗಿದ್ದಾನೆ. ಈತ ಈಗ ಇರುವ ವ್ಯವಸ್ಥೆಯನ್ನು ನಿರಾಕರಿಸಿ ಅದರ ಹೊರಗೆ ನಿಂತು ಅದನ್ನು ನಾಶ ಪಡಿಸಲು ಯತ್ನಿಸುತ್ತಿರುವ ಒಂದು ಪಾತ್ರವಾಗಿವೆ. "ನೀನು ಮ್ಯಾಸ್‌ಮನ್ ಆಗಿ ಬಿಡು. ಈ ನೆಲದ ಸಾರವನ್ನು ಹೀರಿದ, ಕ್ಷುದ್ರ ಚರಿತ್ರೇನ್ನ ಹಾಗೇ ವೈಭವವನ್ನು ಅರ್ಥಮಾಡಿಕೊಂಡು ಒಂದು ಹೊಸ ಕ್ರಾಂತಿಕಾರಿ ಪಕ್ಷವನ್ನು ಈ ದೇಶದಲ್ಲಿ ಕಟ್ಟಬೇಕು" ಎನ್ನುವ ಆದರ್ಶವನ್ನು ಕೃಷ್ಣಪ್ಪನ ಮನಸ್ಸಿನಲ್ಲಿ ಅಣ್ಣಾಜಿ ಕೆತ್ತುತ್ತಾನೆ.

**ಹನುಮನಾಯ್ಕ :** ಹನುಮನಾಯ್ಕ ಕೃಷ್ಣನ ಗೆಳೆಯ. ಈತ ನನ್ನಲ್ಲಿ ಕಷ್ಟ ಕೋಟಲೆಗಳ ಮಧ್ಯೆಯೂ ಇನ್ನೊಬ್ಬರನ್ನು ನಗಿಸಬಲ್ಲ ಜೀವನೋತ್ಸಾಹ ತುಂಬಿರುವವ. ತನ್ನ ಸಹಜ ಲವಲವಿಕೆಯಿಂದಲೇ ಕೃಷ್ಣಪ್ಪನ

ಅಂತರಂಗಕ್ಕೆ ಅನಿವಾರ್ಯವಾದವ. ಈಜುವಾಗ ಮುಳುಗುತ್ತಿದ್ದ ಕೃಷ್ಣಪ್ಪನನ್ನು ಒಮ್ಮೆ ಅವನು ಬದುಕಿಸಿದ್ದ-ಹಾಗೆಯೇ ಕೃಷ್ಣಪ್ಪನ ಅತ್ಯಂತ ಸಂದಿಗ್ಧ ಸನ್ನಿವೇಶಗಳಲ್ಲಿ ಹನುಮನಾಯ್ಕ ಆತನಗೆ ತನ್ನ ಲವಲವಿಕೆಯಿಂದ ಹೊಸ ಜೀವ ಕೊಡುತ್ತಿದ್ದ ಎಂಬುದನ್ನು ಗಮನಿಸಬೇಕು. ಕೃಷ್ಣಪ್ಪ ಬೆಂಗಳೂರಿಗೆ ಬಂದು ನೆಲೆಸಿದಾಗ ಹನುಮನಾಯ್ಕ ಒಮ್ಮೊಮ್ಮೆ ಬಂದು ಅವನನ್ನು ಭೇಟಿಯಾಗುವಷ್ಟು ಸಲಿಗೆ ಅವರಿಲ್ಲಿ ಕೊನೆಯವರೆಗೂ ಇತ್ತು ಎಂಬುದನ್ನು ಗಮನಿಸಬೇಕು. ಇಂತಹ ಭೇಟಿಗಳ ಮೂಲಕ ಹನುಮನಾಯ್ಕ "ತನ್ನನ್ನು ಮತ್ತೆ ಹುಡುಗನನ್ನಾಗಿ ಮಾಡಿಬಿಡುವ ಗೆಣೆಯ" ಎಂದು ಕೃಷ್ಣಪ್ಪ ಸ್ಮರಿಸಿಕೊಳ್ಳುವುದು, ಹನುಮನಾಯ್ಕ ಪ್ರತಿನಿಧಿಸುವ ಜೀವನ ಧೋರಣೆಗಳು ಕೃಷ್ಣಪ್ಪನ ಒಂದು ಅಂಗ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಮುಖ್ಯವಾಗಿ ಗಮನಿಸಬೇಕಾದ ಇನ್ನೊಂದು ವಿಷಯ, ಕೃಷ್ಣಪ್ಪ ತನ್ನ ಅತ್ಯಂತ ಗೊಂದಲಮಯ ದಿನಗಳಲ್ಲೂ ಹನುಮನಾಯ್ಕನ ಲವಲವಿಕೆಯ ಭೇಟಿಯನ್ನು ಸಹಜ ಸ್ಫೂರ್ತಿಯಿಂದ ಸುಖಿಸುತ್ತಿದ್ದ ಎಂಬುದು.

ಹನುಮನಾಯ್ಕ ಊರಲ್ಲೆಲ್ಲ ಸುತ್ತುವವನಾದ್ದರಿಂದ ಬೆಳೆದ ಹುಡುಗಿಯರಿಗೆ ಯಾವ ಬೆಳೆದ ಹುಡುಗನ್ನು ಗಂಟುಹಾಕಬಹುದೆಂಬ ಹೆಂಗಸರ ಒಳಸಂಚಿನಲ್ಲಿ ಭಾಗವಹಿಸುವನು. ಮನೆಯವರೇ ಖುದ್ದಾಗಿ ವಧೂವರರ ಅನ್ವೇಷನೆ ಮಾಡುವ ಮುಂಚೆ ಅವರ ಇಂಗಿತವನ್ನು ತಿಳಿದು ಅಲ್ಲಿಂದಿಲ್ಲಿಗೆ ಓಡಾಡಿ ಸುದ್ದಿ ಮುಟ್ಟಿಸುವವನು. ಊರಲ್ಲಿ ಯಾರ್ಯಾರು ಹೇಗೆ ಮಾತಡುತ್ತಾರೆಂದು ಊಟ ಮುಗಿಸಿ ಕೂತವರಿಗೆ ನಟನೆ ಮಾಡಿ ತೋರಿಸುವ, ಅವನು ಬಂದನೆಂದರೆ ಹೆಂಗಸರಿಗೆ ಮಕ್ಕಳಿಗೆ ಹಬ್ಬ, ಹುಟ್ಟು ಸಾವು ಮದುವೆಗಳಂಥ ವಿಶೇಷ ಎಲ್ಲಿ ನಡೆದರೂ ಅಲ್ಲಲ್ಲಿ ಹನುಮನಾಯ್ಕ ಹಾಜರು ಹನುಮನಾಯ್ಕನ ಪಾತ್ರವು ಜೀವನೋತ್ಸಾಹ ತುಂಬಿದ ಪಾತ್ರವಾಗಿ ಮಾಡಿ ಬಂದಿದೆ.

**ನಾಗರಾಜ್ :** ಅಣ್ಣಾಜಿಯಂತೆಯೇ ಮತ್ತೊಬ್ಬ ಮಾರ್ಕ್ಸ್‌ವಾದಿ ನಾಗರಾಜ್ ತನ್ನ ಸಿದ್ಧಾಂತಗಳ ಆಸರೆಯಲ್ಲಿ ವೈಯಕ್ತಿಕ ದುರಂತಗಳಿಗೆ ಸ್ಪಂದಿಸುವ ಶಕ್ತಿಯನ್ನು ಕಳೆದುಕೊಂಡಿರುವ ಸಿನಿಕ ನಾಗರಾಜ್ ಕೃಷ್ಣಪ್ಪನ ಹರೆಯದ ದಿನಗಳನ್ನು ನೆನಪು ಮಾಡುವಂತಿದ್ದ ಅವನ ಉಗ್ರವಾದ ನಿಷ್ಠುರವಾದ ನಿಲುವಿನಲ್ಲಿ ಅವನ ಅಸಹನೆಯಲ್ಲಿ – ವ್ಯತ್ಯಾಸವೆಂದರೆ ಕೃಷ್ಣಪ್ಪ ರಾಜಕೀಯಕ್ಕೆ ಇಷ್ಟವಿಲ್ಲದೆ ಬಂದಿದ್ದ, ಜೀವನ ಸಫಲವಾಗಲು ಬೇರೆ ದಿಕ್ಕು ಕಾಣದೆ – ನಾಗರಾಜ್‌ಗೆ ರಾಜಕೀಯವಲ್ಲದೆ ಬೇರೇನೂ ಕಾಣಿಸುವುದೇ ಇಲ್ಲ. ಕ್ರಾಂತಿಯಲ್ಲಿಲ್ಲದೇ ಜೀವನ ಸಫಲವಾಗಲು ಬೇರೆ ಮಾರ್ಗಗಳೇ ಇಲ್ಲವೆಂದು ತಿಳಿದಿದ್ದಾನೆ. ಒಂದರ ಮೇಲೆ ಒಂದು ಚಾರ್ಮಿನಾರ್ ಸೇದುತ್ತ ಎಲ್ಲರೂ ತನ್ನ ಮೇಲೆ ಉರಿದು ಬೀಳುವಂತೆ ಮಾತಾಡುತ್ತಾನೆ. ಕೃಷ್ಣಪ್ಪ ಅದೇ ಮಾತನ್ನು ಅದೇ ಧಾಟಿ ತೀವ್ರತೆಗಳಲ್ಲಿ ಮಾತಾಡಿದಾಗ ಸಹಿಸಿಕೊಳ್ಳುವ ಸಹೋದ್ಯೋಗಿಗಳು ನಾಗರಾಜ್ ಬಾಯಿ ತೆರೆದಿದ್ದ ಅವನ ಮೇಲೆ ಬೀಳುತ್ತಾರೆ. ಅವನು ಒಬ್ಬ ಶ್ರೀಮಂತ ಕ್ರಿಮಿನಲ್ ವಕೀಲರ ಮಗ ಡೆಲ್ಲಿ

ಸ್ಕೂಲ್ ಆಫ್ ಎಕನಾಮಿಕ್ಸ್‌ನಲ್ಲಿ ಓದುತ್ತ ಮಾರ್ಕ್ಸಿಸ್ಟ್ ಪಕ್ಷದ ರಷ್ಯಾಪರ ನೀತಿಗೆ ವಿರೋಧಿಯಾಗಿ ಬೇರೆ ಮಾರ್ಗ ಕಾಣದೆ ಸೋಷಲಿಸ್ಟ್ ಬಣವನ್ನು ಸೇರಿದವ ಸೋಷಲಿಸ್ಟರೆಂದರೆ ಅವನಿಗೆ ಅಲರ್ಜಿ. ತಾನು ಸದ್ಯಕ್ಕೆ ಮಾತ್ರ ಇಲ್ಲಿದ್ದೇನೆ ಎಂದು ಮುಚ್ಚುಮರೆ ಮಾಡದೆ ಹೇಳುತ್ತಿದ್ದ ತುಮಕೂರಿನ ರೈತರ ಕ್ಷೇತ್ರದಿಂದ ಭಾರಿ ಬೆಂಬಲ ಪಡೆದು ಗೆದ್ದು ಬಂದಿದ್ದನೆಂದು ಉಳಿದವರು ಅವನನ್ನು ಸಹಿಸುತ್ತಾರೆ. ಕೃಷ್ಣಪ್ಪನ ನಾಯಕ ಸ್ಥಾನಕ್ಕೆ ಆತ ಪ್ರತಿಸ್ಪರ್ಧಿಯೆಂದು ಉಳಿದವರು ಯಾವಾಗಲೂ ಕೃಷ್ಣಪ್ಪನಿಗೆ ಚಾಡಿ ತರುತ್ತಾರೆ. ತನಗೆ ಯಾರು ಸಮವಲ್ಲವೆನ್ನುವಂತೆ ಕೃಷ್ಣಪ್ಪ ನಡೆದುಕೊಳ್ಳುವ ರೀತಿಯನ್ನು ನಾಗರಾಜ್ ಸಹಿಸುವುದಿಲ್ಲ. ಪಕ್ಷದ ಸಭೆಯಲ್ಲಿ ಅವನು ಕೃಷ್ಣಪ್ಪನನ್ನು ಫ್ಯೂಡಲ್ ಎಂದು ಜರೆದಿದ್ದಿದೆ. ಆಡಳಿತದ ಜೊತೆಗೆ ಯಾವ ಒಪ್ಪಂದಕ್ಕೂ ತಯಾರಿಲ್ಲದ ನಾಗರಾಜ್ ಕೃಷ್ಣಪ್ಪನನ್ನು ಕಟುವಾಗಿ ಹಂಗಿಸುತ್ತಾನೆ. "ಮಾವೋ ಹೇಳೋದು ನಿಜ; ಎನಿಮಿಗಿಂತ ರಿವಿಷನಿಸ್ಟ್ ಹೆಚ್ಚು ಅಪಾಯಕಾರಿ" ಸುಖ, ಸವಲತ್ತು, ದಾಕ್ಷಿಣ್ಯಗಳಿಂದ ಸಂಪೂರ್ಣ ವಿಮುಖನಾಗಿ ಈವರೆಗೆ ನಾಗರಾಜ್ ಬದುಕಿದ್ದ, ಒಂಟಿಪಿಶಾಚಿಯಂತೆ, ತನ್ನ ತತ್ವಗಳಿಗೆ ಆತುಕೊಂಡು. ತನ್ನ ವ್ಯಕ್ತಿತ್ವವನ್ನು ತೀವ್ರವಾಗಿ ಒಂದೇ ಗುರಿಗೆ ಮಿತಗೊಳಿಸಿ, ಕೆಂಪಗೆ ಕಾದ ಕಬ್ಬಿಣದ ಸಲಾಕೆಯಂತೆ ಕೃಷ್ಣಪ್ಪನಿಗೆ ಅವನನ್ನು ಕಂಡು ಅಸೂಯೆಯಾಗುತ್ತಿತ್ತು. ಅವನ ಅಪಕ್ವತೆ ಕಂಡು ಗೊಂದಲವಾಗುತ್ತಿತ್ತು.

**ನಾಗೇಶ :** ನಾಗೇಶ ಕೃಷ್ಣಪ್ಪನ ಜೀವನ ಚರಿತ್ರೆಯನ್ನು ಬರೆಯುತ್ತಿರುವ ಯುವಕ. ಈತ ಬಡ ಬ್ರಾಹ್ಮಣ ಕುಟುಂಬದಿಂದ ಬಂದವನು. ಅಪ್ಪ ಸದಾ ವ್ಯಗ್ರನಾಗಿರುತ್ತಿದ್ದ ಗುಮಾಸ್ತ. ಅಣ್ಣನೊಬ್ಬ ಎಂಜಿನಿಯರ್. ಅವನ ಹೆಂಡತಿ ಜಿಪುಣಿಯಾದ್ದರಿಂದ ಅವನಿಂದಾಗುವ ಸಹಾಯ ಅಷ್ಟಕ್ಕಷ್ಟೆ. ಆರು ಮದುವೆಯಾಗದ ತಂಗಿಯರು, ಮಗ ಅರ್ಧಕ್ಕೆ ಓದು ನಿಲ್ಲಿಸಿ, ಮೆರವಣಿಗೆ, ಮಣ್ಣು, ಮಸೀ ಅಂತ ರಾಜಕೀಯದಲ್ಲಿ ಕಾಲ ಕಳೀತಾನೇಂತ ತಾಯಿಗೆ ದುಗುಡ. ನಾಗೇಶ ಮಲಗೋದು ಪಾರ್ಟಿ ಆಪೀಸಿನಲ್ಲಿ. ಉಣ್ಣೋದು ಅಲ್ಲಿ ಇಲ್ಲ. ಕಾಫಿಗೆ ಸಿಗರೇಟಿಗೆ ಕಾಸಾದರೆ ಸಾಕು ಅವನಿಗೆ ಬರಲಿರುವ ಸಮತಾ ವ್ಯವಸ್ಥೇಲಿ ತನ್ನ ಪಾಡು ಸುಧಾರಿಸುತ್ತದೆ ಎಂದು ಅವನು ಕನಸು ಕಟ್ಟುತ್ತಾನೆ. ಕಾಲಹರಣ ಮಾಡೋದು ಅವನಗೆ ಒಗ್ಗಿ ಹೋಗಿದೆ. ಎಚ್.ಎಂ. ಟಿಲಿ ಕೆಲಸ ಕೊಡಿಸಲೇನಯ್ಯ ಎಂದು ಕೇಳಿದರೆ ಬೇಡವೆನ್ನುತ್ತಾನೆ. ಹಾಗೆ ಕೇಳಿದ್ದರಿಂದ ಅವಮಾನವಾಗಿ ಸಿಟ್ಟಾಗುತ್ತಾನೆ. ಎಲ್ಲರಂತೆ ಉದ್ಯೋಗಿಯಾಗಿ ಬದುಕೋದು ಕಳಪೇಂತ ಅವನ ಅಭಿಪ್ರಾಯ ಅಂಥ ಪ್ರತಿಭಾವಶಾಲಿಯೂ ಅಲ್ಲ. ಆದರೆ ಕೃಷ್ಣಪ್ಪನ ವ್ಯಕ್ತಿತ್ವದ ಪ್ರಭೆಗೆ ಮರುಳಾದ ಯುವಕರಲ್ಲಿ ಇವನೊಬ್ಬ.

ಇನ್ನೂ ವೀರಣ್ಣ ಮತ್ತಿತರ ಪಾತ್ರಗಳಿಗೆ ವ್ಯವಸ್ಥೆಯನ್ನು ಕಾಯ್ದುಕೊಳ್ಳುವುದರಲ್ಲೇ ಅವರ ಸ್ವಾರ್ಥ ಅಡಗಿವೆ ಹಾಗೂ ಅವರು ಇಂತಹ ವ್ಯವಸ್ಥೆಯನ್ನು ವೈಭವೀಕರಿಸುತ್ತಾರೆ. ಈ ವ್ಯವಸ್ಥೆ ಕುಸಿಯುವ ಅಪಾಯ ಕಂಡಾಗ ಕೃಷ್ಣಪ್ಪನಂತವರನ್ನು ಬಳಸಿಕೊಂಡು ಅದನ್ನು ಉಳಿಸಲು ಹೆಣಗಾಡುತ್ತಾರೆ. ಒಟ್ಟಾರೆ ಕ್ಷುದ್ರತೆಯಲ್ಲೇ ಮೈ ಮರೆಯುವ ಭ್ರಷ್ಟಲೋಕ ಇದು.

## ಸ್ತ್ರೀ ಪಾತ್ರಗಳು :

**ಗೌರಿದೇಶಪಾಂಡೆ :** ತೀರ ಭಿನ್ನವಾದ ರೀತಿಯಲ್ಲಿ ಕೃಷ್ಣಪ್ಪನ ಉದ್ದೇಶಗಳು ಸ್ಪಷ್ಟವಾಗುವುದಕ್ಕೆ ಕಾರಣವಾದ ಪಾತ್ರ ಗೌರಿದೇಶಪಾಂಡೆ, ಗೌರಿದೇಶಪಾಂಡೆ ಕಾಲೇಜಿನಲ್ಲಿ ಹೆಸರಾದ ನರ್ತಕಿ, ಸಂಗೀತಗಾರ್ತಿ, ಕ್ಲಾಸಿನಲ್ಲಿ ಮೊದಲನೆಯವಳು. ಅವಳಿಗೆ ಕೃಷ್ಣಪ್ಪನೆಂದರೆ, ಇಷ್ಟವೆಂದು ಊಹಿಸಿದ್ದ ಜಾಣೆಯರು ಅವಳನ್ನು ರಾಧೆಯೆಂದು ಕಿಚಾಯಿಸುತ್ತಿದ್ದರು. ಎದುರಿಗಲ್ಲ ಹಿಂದೆ. ಇದಕ್ಕೆ ಕಾರಣ ಗೌರಿ ಯಾರ ಜೊತೆಯೂ ಹೆಚ್ಚು ಬಳಸದೆ ಒಂಟಿಯಾಗಿರುತ್ತಿದ್ದುದು.

ಗೌರಿಯ ತಾಯಿ ಗಂಡನನ್ನು ಬಿಟ್ಟು ಓಡಿ ಬಂದು ಅಡಿಕೆ ಮಂಡಿ ಸಾಹುಕಾರನಾದ ನಂಜಪ್ಪನ ಸೂಳೆಯಾಗಿ ಬದುಕುತ್ತಿದ್ದಾಳೆಂದು ಗೊತ್ತಿದ್ದು ಗೌರಿಯನ್ನು ನಿಕೃಷ್ಟವಾಗಿ ಕಾಣುವುದು ಸಾಧ್ಯವಿರಲಿಲ್ಲ. ಗೌರಿ ಅಷ್ಟು ಗಂಭೀರವಾಗಿರುವಳು. ಗೌರಿ ದೇಶಪಾಂಡೆ ಕಾರಲ್ಲೇ ನಿತ್ಯ ಕಾಲೇಜಿಗೆ ಬಂದು ಹೋಗುವುದು. ಇದರಿಂದ ಉಳಿದ ಹುಡುಗಿಯರಿಗೆ ಅವಳ ಬಗ್ಗೆ ಇನ್ನಷ್ಟು ಅಸೂಯೆ ಸಭೆಯಲ್ಲಿ ಕುಣಿಯುವ ಹಾಡುವ ಹುಡುಗಿ ನಾಚಿಕೆಗೆಟ್ಟವಳೆಂದೂ ಹುಡುಗಿಯರೆಲ್ಲ ಆಡಿಕೊಳ್ಳುವರು. ಜೊತೆಗೆ ಗೌರಿಯ ವರ್ತನೆಯಿಂದ ತಬ್ಬಿಬ್ಬಾಗುವರು.

ಈ ಹುಡುಗಿಯರ ಜಗತ್ತಿಗೂ ತನಗೂ ಸಂಬಂಧವೇ ಇಲ್ಲವೆನ್ನುವಂತೆ ಗೌರಿ ಇರುವಳು. ಮೈಮೇಲೆ ಒಡವೆಯನ್ನೂ ಧರಿಸದೆ ಬಿಳಿಯ ಸೀರೆಯುಟ್ಟು, ಬಿಳಿ ಕುಪ್ಪಸ ತೊಟ್ಟು, ತನ್ನ ಉದ್ದನೆಯ ಕಪ್ಪು ಜಡೆಗೆ ಒಂದು ಬಿಳಿ ಗುಲಾಬಿ ಸಿಕ್ಕಿಸಿಕೊಂಡು ಅವಳು ಗಂಭೀರವಾಗಿ ಕ್ಲಾಸಿನಲ್ಲಿ ಕೂರುವಳು. ಲೇಡಿಸ್ ರೂಮಿನಲ್ಲಿದ್ದಾಗ ಏನಾದರೊಂದು ಪುಸ್ತಕ ಹಿಡಿದು ಓದುತ್ತಿರುವಳು. ಏಕವಚನದಲ್ಲಿ ಮಾತಾಡಿಸ ಬಂದವರನ್ನು ಮೃದುವಾಗಿ ಬಹುವಚನದಲ್ಲಿ ಸಂಬೋಧಿಸಿ ತನ್ನ ದೂರವನ್ನು ಕಾಯ್ದುಕೊಳ್ಳುವಳು. ಕೃಷ್ಣಪ್ಪ ಇವಳನ್ನು ಎಂದೂ ಮಾತಾಡಿಸದಿದ್ದರೂ ತನ್ನ ಸರೀಕಳು ಎಂಬಂತೆ ಅವಳನ್ನು ನೋಡುವನು. ಇಬ್ಬರೂ ಪರಸ್ಪರ ಪ್ರೀತಿಸುತ್ತಿದ್ದರು, ಇಬ್ಬರೂ ಅದನ್ನು ವ್ಯಕ್ತಪಡಿಸುತ್ತಿರಲಿಲ್ಲ. ಗೌರಿ ದೇಶಪಾಂಡೆಯಲ್ಲಿ ಸಮಾನ ಧರ್ಮಿಯನ್ನು ಕಂಡರೂ ಕೃಷ್ಣಪ್ಪ ಅವಳೊಡನೆ ಇಡಿಯಾದ ಸಂಬಂಧವನ್ನು ಬೆಳೆಸಿಕೊಳ್ಳಲು ಶಕ್ತನಾಗುವುದಿಲ್ಲ. ಅವರಿಬ್ಬರ ಸಾಂಸ್ಕೃತಿಕ ಹಿನ್ನೆಲೆ ಮತ್ತು ಮನೋವೃತ್ತಿಗಳ ಅಂತರ ಇವುಗಳಿಂದಾಗಿ ಅವರ ದಾರಿಗಳು ಬೇರೆ ಬೇರೆಯಾಗುತ್ತವೆ. "ನಂಗೆ ತುಂಬ ದೇಶಗಳಲ್ಲಿ ತಿರುಗಾಡಬೇಕು, ತುಂಬಾ ಪುಸ್ತಕ ಓದಬೇಕು, ಬಗೆಬಗೆಯ ಜನರ ಜೊತೆ ಬೆರೀಬೇಕು" ಎನ್ನುವ ಗೌರಿದೇಶಪಾಂಡೆ ಅಮೇರಿಕ, ದಿಲ್ಲಿ ಹೀಗೆ ಸುತ್ತುತ್ತಾಳೆ. "ಪಾಲಿಟಿಕ್ಸ್ ಅಂದ್ರೆ ನನಗೆ ಬೋರ್"[೧] ಎಂದು ತನ್ನ ಖಚಿತವಾದ ಅಭಿಪ್ರಾಯವನ್ನು

೧. ಅವಸ್ಥೆ – ಪುಟ – ೫೧

ಕೃಷ್ಣಪ್ಪನಗೆ ತಿಳಿಸುತ್ತಾಳೆ. ಇದೇ ಸಣ್ಣ ಊರಂತ ನನಗೆ ಅನ್ನಿಸತ್ತೆ. ದೊಡ್ಡೂರಲ್ಲಿ ಪ್ರೈವಸಿ ಇರುತ್ತೆ. ಬೊಂಬಾಯಿಗೋ ಡೆಲ್ಲಿಗೋ ಹೋಗಿ ಓದಬೇಕೂಂತಿದೀನಿ ಎಂಬುದು ಅವಳ ಆಸೆಯಾಗಿತ್ತು. ಹಾಗಾಗಿ ಅವಳು ಅಮೇರಿಕಾದಲ್ಲಿ ಅಲ್ಲಿಯ ಚಳುವಳಿಗಳಲ್ಲಿ ಭಾಗವಹಿಸತೊಡಗಿದ್ದಳು. ಆದರೆ, ನೆಲ ಇನ್ನೂ ಗಟ್ಟಿಯಾಗಿ ಬೇರು ಬಿಡಲು ಕೃಷ್ಣಪ್ಪ ಕಾಲೇಜು ಬಿಟ್ಟು ಹಳ್ಳಿ ಸೇರುತ್ತಾನೆ. ಗೌರಿಯೊಡನೆ ದೈಹಿಕವಾಗಿ ಬೆಚ್ಚಿಕೊಳ್ಳುವುದು ಕೃಷ್ಣಪ್ಪನಿಗೆ ಈ ಅವಸ್ಥೆಯಲ್ಲಿ ಸಾಧ್ಯವಾಗುವುದಿಲ್ಲವಾದರೂ ಅವಳಲ್ಲಿ ಸಮಾಂತರ ವ್ಯಕ್ತಿತ್ವವನ್ನು ಅವನು ಗುರುತಿಸುತ್ತಾನೆ ತನ್ನಂತೆಯೇ ಕ್ಷುದ್ರ ಜೀವನವನ್ನು ಒಪ್ಪಿಕೊಳ್ಳದ ಪ್ರವೃತ್ತಿ ಅವಳದು ಎಂಬ ಅರಿವು ಅವನನ್ನು ಅವಳತ್ತ ಆಕರ್ಷಿಸುತ್ತದೆ.

ಗೌರಿ ದೇಶಪಾಂಡೆ ಅಮೇರಿಕಾದಲ್ಲಿ ನೆಲೆಸಿದ ನಂತರ ಬಹಳ ಬದಲಾದಳು ಅವಳೇ ಹೇಳುವಂತೆ ಅಮೇರಿಕಾದಲ್ಲಿ ಒಬ್ಬ ಸೋಷಿಯಾಲಜಿಸ್ಟನ್ನ ಮದುವೆಯಾಗಿದ್ದಳು. ಮದುವೆ ಅಂದರೆ ಅವನ ಒಟ್ಟಿಗಿದ್ದಳು. ಸಾಮಾನ್ಯ ಮನುಷ್ಯ ಮಾರ್ಕ್ಸ್‌ವಾದಿ – ಕ್ಯಾಂಪಸ್‌ನಲ್ಲಿ ಮಾರ್ಟಿನ್ ಲೂಥರ್ ಕಿಂಗ್ ಪರ ಚಳುವಳೀಲಿ ಭಾಗವಹಿಸುತ್ತಿದ್ದ. ಜೊತೆಗೆ ಗೌರಿಯೂ ಕೂಡ. ಈಗ ಗೌರಿಗೆ ರಾಜಕೀಯ ಅಂದರೆ ಬಹಳ ಆಸಕ್ತಿ. ಮುಂದೆ ಗೌರಿ ದೇಶಪಾಂಡೆ ಕೃಷ್ಣಪ್ಪನನ್ನು ನೋಡಿಕೊಳ್ಳಲು ಅವನ ಮನೆಯಲ್ಲಿಯೇ ಉಳಿದಳು. ಆಗ ಅವಳು ಅರ್ಧ ದೇಹ ಜಡವಾಗಿರುವ ಕೃಷ್ಣಪ್ಪನೊಡನೆ ಬಾತ್‌ಟಬ್‌ನಲ್ಲಿ ಪುರುಷಾಯಿತ ಕ್ರಮದಲ್ಲಿ ಅವನನ್ನು ಕೂಡುತ್ತಾಳೆ. ಕೃಷ್ಣಪ್ಪ "ಎಚ್ಚರವಾದಾಗ ಅದೇನು ಕನಸೋ ಎಂದು ಸೋಜಿಗಪಡುತ್ತಾ ತಾನು ಟವಲ್ ಮೇಲೆ ಮಲಗಿರುವುದನ್ನು ಗೌರಿ ತನ್ನ ಪಕ್ಕದಲ್ಲೇ ಚಿತ್ತಲೆಯಾಗಿ ಸಿಗರೇಟ್ ಸೇದುತ್ತಾ ಕೂತಿರುವುದನ್ನು ಗಮನಿಸಿದ" ಇದು ಪ್ರಕ್ಷುಬ್ಧ ಸ್ವಪ್ನ ಲೋಕದ ಅಸಂಗತಿಯಂತೆ ಕಂಡು ಬರುತ್ತವೆ.

"ಗಂಡಸಿನ ಸಂಗಡದ ಆಸೆ ಇದ್ದರೂ ತನ್ನ ದೇಹ ಮಕ್ಕಳನ್ನು ಪಡೆಯೋ ಸಾಧನವಾಗಲು" ಇಷ್ಟಪಡದ, ಕೃಷ್ಣಪ್ಪನನ್ನು ಪ್ರೀತಿಸಿದರೂ ತನ್ನ ಸ್ವಾಭಿಮಾನದ ಕೋಟೆಯಿಂದ ಹೊರಬರಲಾಗದ, ಅಮೇರಿಕಾದಲ್ಲಿ ಮಾರ್ಟಿನ್ ಲೂಥರ್ ಕಿಂಗ್ ಚಳುವಳಿಯಲ್ಲಿ ಭಾಗವಹಿಸುವ, ಇಂಡಿಯಾದಲ್ಲಿ ಡಿಕ್ಟೇಟರ್‌ಶಿಪ್ ಬರದಂತೆ ಪ್ರಯತ್ನಿಸುವ ಗೌರಿ ದೇಶಪಾಂಡೆ ಇಂತಹ ದ್ವಂದ್ವಾತ್ಮಕ ವ್ಯಕ್ತಿತ್ವಗಳನ್ನು ಪ್ರತಿನಿಧಿಸುತ್ತಾಳೆ.

**ಸೀತೆ:** ಸೀತೆ ಕೃಷ್ಣಪ್ಪನ ಹೆಂಡತಿ. ಈಕೆ ಬ್ಯಾಂಕೊಂದರಲ್ಲಿ ಕೆಲಸ ಮಾಡುವಳು. ಕೃಷ್ಣಪ್ಪನಿಗೆ ಪಾರ್ಶ್ವವಾಯು ಬಡಿದಿರುವುದರಿಂದ ಅವನ ಸೇವೆಯನ್ನು ಮಾಡುವಳು. ಆದರೆ, ಕಿರಿಕಿರಿಯಿಂದ ಬ್ಯಾಂಕಿಗೆ ಹೋಗುವ ಅವಸರದಲ್ಲಿ ಸೀತೆ ಮಾಡುವ ಕೆಲಸ ಕೃಷ್ಣಪ್ಪನಿಗೆ ಇಷ್ಟವಾಗುವುದಿಲ್ಲ. ಕೃಷ್ಣಪ್ಪನಿಗೆ ಪ್ರಿಯರಾದವರು

ಯಾರಾದರೂ ಮನೆಗೆ ಬಂದರೆ ಅವಳಿಗೆ ಕಿರಿಕಿರಿ – ಅಭದ್ರ ಭಾವನೆ. "ಕುದುರೆ ಬಾಲಾನ ಕಟ್ಟಿಕೊಂಡು ಬಂದಿರಬೇಕು. ಈವಯ್ಯನ ಮುಖ ಕಂಡು ವರ್ಷದ ಮೇಲಾಯ್ತು"[೧] ಬೆನ್ನನ್ನು ಒರೆಸುತ್ತಾ ಸೀತೆ ಹೇಳುತ್ತಾಳೆ.

ಈ ಮಾತು ಕೇಳಿ ಕೃಷ್ಣಪ್ಪನಿಗೆ ರುಮ್ಮನೆ ಸಿಟ್ಟು ಬಂತು. ತಾನೇನು ಮಾಡುತ್ತಿದ್ದೇನೆಂದು ತಿಳಿಯೋದರ ಒಳಗೆ ಇನ್ನೂ ಶಕ್ತಿಯಿದ್ದ ಬಲಗೈಯಿಂದ ಅವಳನ್ನು ಗುದ್ದಿದ ಅವಳು ಆದ ನೋಪಿಗಿಂತ ಹೆಚ್ಚು ಸಂಕಟಪಡುತ್ತ 'ಅಯೋಗ್ಯ' ಎಂದು ಕೂತು ಅಳತೊಡಗಿದಳು. ಕೃಷ್ಣಪ್ಪನಿಗೆ ತನ್ನ ಬಗ್ಗೆ ಅವಳ ಬಗ್ಗೆ ಅತ್ಯಂತ ಹೇಸಿಗೆಯಾಗಿ ಸತ್ತುಬಿಡಬೇಕೆನ್ನಿಸಿತು. 'ಹೆಣ್ಣು ಹೆಂಗಸಿನ ಮೇಲೆ ಕೈಮಾಡೋ ಇವರು ಕ್ರಾಂತಿ ಮಾಡ್ತಾರಂತೆ' – ಶುರುವಾಯಿತು ಸೀತೆಯ ಗೊಣಗಾಟ. ಹೊಡೆದ ಮೇಲೆ ಅವನಿಗೆ ಕೂಡ ಹಾಗೆನ್ನಿಸುವುದರಿಂದ ಮಂಕಾಗಿ ಕೂತು ಕಾದ. ಅವಳೇ ಬಟ್ಟೆಯನ್ನು ತೊಡಿಸಬೇಕು ಇನ್ನು. ಹೀಗೆ ಏನೇನೋ ಯೋಚಿಸುತ್ತ ಮೂಗನ್ನು ಸೀನಿಕೊಂಡು ಅಳುತ್ತ ಕೂತ ಸೀತೆಯನ್ನು ಮರೆಯಲು ಪ್ರಯತ್ನಿಸುತ್ತಾನೆ. ಆಗಲ್ಲ. ಅವಳು ಗೊಣಗುತ್ತ ಪಂಚೆಯುಡಿಸಿ ಜುಬ್ಬ ಹಾಕಿ ತಲೆ ಬಾಚಿಕೊಳ್ಳಲು ಬಾಚಣಿಗೆಯನ್ನು ಬಲಗೈಯಲ್ಲಿ ಇಡುತ್ತಾಳೆ. ಅವನು ಕೂತಿದ್ದ ವೀಲ್ ಚೇರನ್ನು ರೂಮಿಗೆ ತಳ್ಳಿ ಗೊಣಗುತ್ತಲೇ ಅಡಿಗೆ ಮನೆಗೆ ಹೋಗುತ್ತಾಳೆ.

ಈ ಕಾದಂಬರಿಯಲ್ಲಿ ಕೃಷ್ಣಪ್ಪ ಅಣ್ಣಾಜಿ ಇವರ ಪಾತ್ರಗಳಿಗೆ ಬಿಟ್ಟಿರುವ ಒತ್ತಿನಿಂದ ಇತರ ಪಾತ್ರಗಳು, ಲೂಸಿನಾ, ಜ್ಯೋತಿ, ಕೃಷ್ಣಪ್ಪನ ತಾಯಿ ಮುಂತಾದ ಸ್ತ್ರೀ ಪಾತ್ರಗಳು ಪೇಲವವಾಗಿವೆ ಎನಿಸುತ್ತದೆ. ಹೀಗೆ ಈ ಕಾದಂಬರಿಯ ಪಾತ್ರಗಳು ವೈವಿಧ್ಯತೆಯಿಂದ ಕೂಡಿದ್ದು ಮಹತ್ತಾದ ವೈಚಾರಿಕತೆಯನ್ನು ತಿಳಿಸಲು ಪ್ರಯತ್ನಿಸುತ್ತವೆ. ಆಧುನಿಕ ಸಮಾಜ ರಚನೆಗಳನ್ನು ಹಾಗೂ ವ್ಯವಸ್ಥೆಗಳನ್ನು ಅತ್ಯಂತ ಕಾಳಜಿಯಿಂದ ನಿಷ್ಠುರವಾಗಿ ಶೋಧಿಸುವ ಪರೀಕ್ಷಿಸುವ ಕೆಲವೇ ಸಾಹಿತ್ಯ ಕೃತಿಗಳಲ್ಲಿ 'ಅವಸ್ಥೆ' ಮುಖ್ಯವಾದುದು. ಕಾದಂಬರಿಯ ಶ್ರೇಷ್ಠತೆಗೆ ಈ ಪಾತ್ರಗಳ ಕೊಡುಗೆ ಮಹತ್ವವಾದದ್ದಾಗಿದೆ.

---

೧. ಅವಸ್ಥೆ – ಯು.ಆರ್. ಅನಂತಮೂರ್ತಿ – ಪುಟ – ೧೦೩

# ಅಧ್ಯಾಯ – ೪

## ಮತದಾನ ಕಾದಂಬರಿಯಲ್ಲಿನ ಪಾತ್ರಗಳು

ಒಬ್ಬ ಪ್ರಜ್ಞಾಪೂರ್ವ ಲೇಖಕನು ಒಂದು ಸಾಮಾಜಿಕ ಸಂದರ್ಭವನ್ನು ಪರಿಪೂರ್ಣವಾಗಿ ಚಿತ್ರಿಸುತ್ತಾನೆ. ಒಂದು ಕಾದಂಬರಿ ಇದನ್ನು ತಿಳಿಯಲು ಹಲವಾರು ಪಾತ್ರಗಳನ್ನು ಬಳಸಿಕೊಳ್ಳುತ್ತ ಪ್ರತಿಯೊಬ್ಬ ಮನುಷ್ಯನು ಒಂದೇ ಸಮಾಜದ ಸನ್ನಿವೇಶದಲ್ಲಿ ಜೀವಿಸಿದ್ದರೂ ಒಬ್ಬನು ಮತ್ತೊಬ್ಬನಿಗಿಂತ ಭಿನ್ನವಾಗಿರುತ್ತಾನೆ. ಇದಕ್ಕೆ ವ್ಯಕ್ತಿಗಳ ಮನೋಧರ್ಮವೇ ಕಾರಣ. ಹೀಗೆ ವಿಭಿನ್ನ ದೃಷ್ಟಿಕೋನದ ವೈವಿಧ್ಯ ಪಾತ್ರಗಳನ್ನು ಭೈರಪ್ಪನವರ 'ಮತದಾನ'ದಲ್ಲಿ ಕಾಣಬಹುದು.

**ಶಿವಪ್ಪ :** ಡಾ॥ ಶಿವಪ್ಪ ಈ ಕಾದಂಬರಿಯ ಪ್ರಧಾನ ಪಾತ್ರ. ಈತನೇ ಈ ಕಾದಂಬರಿಯ ನಾಯಕ. ಡಾ॥ ಶಿವಪ್ಪನ ಪಾತ್ರವನ್ನು ನಮಗೆ ಏಕಕಾಲಕ್ಕೆ ಆಶ್ಚರ್ಯ ಆನಂದ ಉಂಟಾಗುವಂತೆ ಚಿತ್ರಿಸಿದ್ದಾರೆ. ಇವತ್ತಿನ ಹಳ್ಳಿಗಳಲ್ಲಿ ಇಂಥ ಡಾಕ್ಟರರು ಸಿಗುವರೇ ಎಂಬ ಸಂದೇಹವು ಬುರುವುದುಂಟು ಡಾ॥ ಶಿವಪ್ಪ ಕಾಸು ತೆಗೆದುಕೊಳ್ಳದೆ ರೋಗಿಗಳಿಗೆ ಚಿಕಿತ್ಸೆ ಮಾಡಬೇಕು ಎನ್ನುವ ಆದರ್ಶ ಹೊತ್ತು ಆ ದಿಶೆಯಲ್ಲಿ ಹೆಣಗುತ್ತಿದ್ದಾತ. ಗಾಂಧೀ ಯುಗದ ಆದರ್ಶವನ್ನು ಈತನಲ್ಲಿ ನಾವು ಕಾಣಬಹುದು.

ಡಾ॥ ಶಿವಪ್ಪ ಒಬ್ಬ ಸಾಮಾನ್ಯ ವ್ಯಕ್ತಿ. ಒಬ್ಬ ಸಾಮಾನ್ಯ ವ್ಯಕ್ತಿಯನ್ನು ತಮ್ಮ ಕಾದಂಬರಿಗೆ ನಾಯಕನನ್ನಾಗಿ ಆರಿಸುವುದರಲ್ಲಿಯೇ ಭೈರಪ್ಪನವರ ಕಾದಂಬರಿಯ ಸ್ವರೂಪ ಬದಲಾದುದನ್ನು ಕಾಣುತ್ತೇವೆ. ಭೈರಪ್ಪನವರ ಹಿಂದಿನ ಕಾದಂಬರಿಗಳಿಗೆ ಶ್ರೋತ್ರಿಯವರಂತಹ ಭವ್ಯ ವ್ಯಕ್ತಿ ಡಾ॥ ಸದಾಶಿವರಾಯರಂತಹ ವಿದ್ವಾಂಸರು ಆನಂದ, ಸತ್ಯರೆಂತಹ ಬುದ್ಧಜೀವಿಗಳು, ಸಂವೇದನಾಶೀಲರು ಕಥಾನಾಯಕರಾಗಿದ್ದಾರೆ ಎಂ.ಬಿ.ಬಿ.ಎಸ್. ಓದಿ ತನ್ನ ವೃತ್ತಿಯಿಂದ ನಾಲ್ಕು ಜನ ನಿಸ್ಸಹಾಯಕರಿಗೆ ಸಹಾಯವಾದರೆ ಸಾಕು. ತನ್ನ ವೃತ್ತಿ ಸಾರ್ಥಕವೆನ್ನುವ ಒಬ್ಬ ಸಾಮಾನ್ಯ ವೈದ್ಯ ಡಾ॥ ಶಿವಪ್ಪ ಮತದಾನದ ಕಾದಂಬರಿಗೆ ನಾಯಕನಾಗಿದ್ದಾನೆ.

ಮೈಸೂರು ಮೆಡಿಕಲ್ ಕಾಲೇಜಿನಲ್ಲಿ ಎಂ.ಬಿ.ಬಿ.ಎಸ್. ಓದಿ ಮುಗಿಸಿದ ಮೇಲೆ ಶಿವಪ್ಪ ಹಳ್ಳಿಯಲ್ಲಿ ಸೇವೆ ಮಾಡಬೇಕೆಂಬ ಧ್ಯೇಯದಿಂದ ತನ್ನ ಊರಿನಲ್ಲಿ 'ಜನತಾ ಶುಶ್ರೂಷಾಲಯ' ಎಂಬ ಉಚಿತ ಶುಶ್ರೂಷಾಲಯವನ್ನು ತನ್ನ ನಾಡ ಹೆಂಚಿನ ಮನೆಯಲ್ಲಿಯೇ ಆಡಂಬರವಿಲ್ಲದೇ ನಡೆಸಿಕೊಂಡು ಹೋಗುತ್ತಿದ್ದಾನೆ. ಉಚಿತವೆಂದರೆ, ಶುದ್ಧ ಉಚಿತವಾಗಿ ನಡೆಸಲು ಅವನ ಹತ್ತಿರ ಹಣವಿಲ್ಲ. ಔಷಧಿಯ ಖರ್ಚಿನಷ್ಟೇ ರೋಗಿಗಳಿಂದ ತೆಗೆದುಕೊಳ್ಳುತ್ತಾನೆ. ಒಂದು ಮಾತ್ರೆಗೆ ನಾಲ್ಕು ಕಾಸು ಬೆಲೆಯಿದ್ದರೆ ಅಷ್ಟನ್ನೇ

ಕೇಳುತ್ತಾನೆ. ಅಷ್ಟನ್ನೂ ಕೊಡಲಾರದ ಬಡವರಿಗೆ ಅದೂ ಉಚಿತವಾಗಿ ದೊರೆಯುತ್ತದೆ. ತನ್ನ ಹರಕ್ಯುಲೆಸ್ ಸೈಕಲ್ ಹತ್ತಿ ಯಾರು ಕರೆದರೂ ಸುತ್ತಮುತ್ತಲ ಹಳ್ಳಿಗಳಿಗೆ ಹೋಗಿ ರೋಗಿಗಳನ್ನು ನೋಡಿ ಔಷಧಿ ಕೊಡುತ್ತಾನೆ. ಶಿವಪ್ಪ ಅನುಕೂಲಸ್ಥನಲ್ಲ. ಜನಸೇವೆ ಮಾಡಬೇಕಾದರೆ ಶ್ರೀಮಂತಿಕೆಯ ಅಗತ್ಯವಿಲ್ಲವೆಂದು ಅವನಗೆ ತಿಳಿದಿದೆ. ಚಿಕ್ಕವಯಸ್ಸಿನಲ್ಲೇ ಈತನ ತಂದೆ ತೀರಿ ಹೋದರು. ಮನೆಯಲ್ಲಿ ತಾಯಿ ಕಲ್ಲಮ್ಮ ಮತ್ತು ಶಿವಪ್ಪ ಇಬ್ಬರೇ ವಾಸವಿದ್ದಾರೆ. ಅವನ ಅಕ್ಕ ಪುಟ್ಟಕ್ಕ ತನ್ನ ಗಂಡನ ಮನೆಯಾದ ಕೊಪ್ಪಲಿನಲ್ಲಿ ಇದ್ದಾಳೆ. ಶಿವಪ್ಪನಿಗೆ ಇರುವ ಜಮೀನೆಂದರೆ ಮೂರು ಎಕರೆ ಹೊಲ ಮೇಲೆ ಒಂದು ನೂರು ತೆಂಗಿನ ಮರ ತಾಯಿಯೇ ಜಮೀನಿನ ಮೇಲ್ವಿಚಾರಣೆ ನಡೆಸುತ್ತಾಳೆ. ತಾಯಿ ಮಗನ ಜೀವನಕ್ಕೆ ಅಷ್ಟು ಸಾಕು.

ಜನತಾ ಶುಶ್ರೂಷಾಲಯವನ್ನು ಆಡಂಬರವಿಲ್ಲದೆ ನಡೆಸಿಕೊಂಡು ಹೊರಟ ಡಾ॥ ಶಿವಪ್ಪನು ತಾಯಿ ಕಲ್ಲಮ್ಮ ಮತ್ತು ಗೆಳೆಯ ಬೋಜಣ್ಣನ ಒತ್ತಾಯದ ಮೇರೆಗೆ ಕನ್ಯೆ ನೋಡಲು ಹೋಗುತ್ತಾನೆ. ಶಿವಪ್ಪನಿಗೆ ಹೆಣ್ಣು ಕೊಡಲು ಯತ್ನಿಸುವವರು ಎರಡು ಬಲಾಢ್ಯ ಕುಳಗಳು. ಒಬ್ಬರು ಹಿಂದೆ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದು, ಈಗ ಜನತಾ ಸೇವಕ ಪಕ್ಷದ ಬೋರ್ಡ್ ಹಾಕಿದ್ದ ಸಾದರವಳ್ಳಿಯವರು. ಇನ್ನೊಬ್ಬರು ಸಚಿವ ನಾಗರವಳ್ಳಿ, ಸ್ನೇಹ, ಬೆಂಬಲ ಸಂಪಾದಿಸಿದ್ದ ಕಂಟ್ರಾಕ್ಟರ್ ಶಿವಗೆರೆ ರಾಮಲಿಂಗೇಗೌಡರು. ಈ ಇಬ್ಬರೂ ಆತನಗೆ ಹೆಣ್ಣು ಕೊಡಲು ಮುಂದಾಗುವುದು ಆತನ ಆದರ್ಶಕ್ಕೆ ಮೆಚ್ಚಿ ಅಲ್ಲ: ತಮ್ಮ ಆಢ್ಯತನವನ್ನು ಮೆರೆಯಲಿಕ್ಕೆ. ಹಿಂದೊಮ್ಮೆ ವಿಧಾನಸಭೆಯ ಸದಸ್ಯರಾಗಿದ್ದು ಈ ವಿರೋಧ ಪಕ್ಷದಲ್ಲಿರುವ ಶ್ರೀಮಂತ ಸಂದರವಳ್ಳಿಯವರ ಕನ್ಯೆಯನ್ನು ನೋಡಿ ಸಂಬಂಧ ಬೇಡವೆನ್ನುತ್ತಾನೆ. ಕಾರಣ, ಹುಡುಗಿ ಕಪ್ಪಾಗಿರುವುದರ ಜೊತೆಗೆ ಲಗ್ನದ ನಂತರ ಅಳಿಯ ಪರದೇಶಕ್ಕೆ ಹೋಗಿ ಹೆಚ್ಚಿನ ಓದು ಓದಿ ಬಂದು ಪಟ್ಟಣದಲ್ಲಿದ್ದುಕೊಂಡು ದುಡ್ಡು ಗಳಿಸಬೇಕೆನ್ನುವ ಆಸೆ ಬೀಗರಿಗಿದ್ದುದರಿಂದ ಇದರಿಂದ ತಾನು ಇರಿಸಿಕೊಂಡಿದ್ದ ಹಳ್ಳಿ ಜನರ ಸೇವೆ ತಪ್ಪುವುದೆಂಬ ಅರಿವು ಶಿವಪ್ಪನಿಗಿದೆ.

ಮತ್ತೆ ಅಕ್ಕ, ಭಾವ ತಾಯಿಯ ಸಲಹೆಯ ಪ್ರಕಾರ ಮಂತ್ರಿಗಳಾದ ನಾಗರವಳ್ಳಿಯ ಅಪ್ಪಾಜಿಯವರ ಪ್ರೀತಿ ಸಂಪಾದಿಸಿ ಶಿವಗೆರೆ ಕಂಟ್ರಾಕ್ಟರ್ ರಾಮಲಿಂಗೇಗೌಡರ ಮಗಳು ರಂಗಲಕ್ಷ್ಮಿಯ ವಿಷಯ ಬಂದಾಗ ಶಿವಪ್ಪ ಹೋಗಿ ನೋಡಿ ಮನಸ್ಸಿನಲ್ಲಿ ಒಪ್ಪಿಕೊಂಡು ಬರುತ್ತಾನೆ. ಆದರೆ, ಇಲ್ಲಿಯೂ ಬೀಗರ ಇಚ್ಛೆ ಸಾದರವಳ್ಳಿಯವರಂತೆ ಪಟ್ಟಣ ಸೇರಿಸುವುದಾಗಿದ್ದರಿಂದ ಮತ್ತೆ ತನ್ನ ಆದರ್ಶಕ್ಕೆ ಪೆಟ್ಟು ಬೀಳುವುದೆನ್ನುವುದಕ್ಕೆ ಈ ಸಂಬಂಧದಲ್ಲೂ ಉದಾಸೀನವಾಗಿರತೊಡಗಿದೆ. ಈ ಮೊದಲು ಒಮ್ಮೆ ಶಿವಗೆರೆಯವರೂ ಸಾದರವಳ್ಳಿಯವರೂ ನೆಂಟಸ್ತಿಕೆಯ ಬಗ್ಗೆ ಪ್ರಯತ್ನಿಸಿದಾಗ ನಾಗರವಳ್ಳಿ ಮಂತ್ರಿಗಳಿಂದ ಅದು ತಪ್ಪಿದ ಬಗ್ಗೆ ಸಿಟ್ಟಿನಿಂದ ಒಮ್ಮೆ ಅಸಮ್ಮತಿ ಸೂಚಿಸಿದ್ದರೂ, ಹೇಗಾದರೂ ಡಾ॥ ಶಿವಪ್ಪನ ಸಂಬಂಧವನ್ನು ಬೆಳೆಸಿ

ಶಿವಗೆರೆಯವರ ಮುಖಕ್ಕೆ ಮಸಿ ಬಳಿಯಬೇಕೆಂದು ಮತ್ತೊಂದು ಸಲ ಸಾದರವಳ್ಳಿಯವರು ಪ್ರಯತ್ನಿಸಿದಾಗ "ನಿಮ್ಮೆಣ್ಣು ನಂಗೆ ಮನಸ್ಗೆ ಬರಲಿಲ್ಲ. ನನ್ನ ಮತ್ತ ಕೇಳ್ಬ್ಯಾಡಿ" ಎಂದು ಯಾವುದೋ ಗುಂಗಿನಲ್ಲಿರುವವನು ಹೇಳಿದಂತೆ ಮಾತಾಡಿದ ಶಿವಪ್ಪನ ವರ್ತನೆ ಬರೀ ವ್ಯವಹಾರ ಬಲ್ಲಂತ ಆ ಜನಗಳಿಗೆ ಹೇಗೆ ಅರ್ಥವಾಗಬೇಕು? ಪಟ್ಟಣದ ವಾತಾವರಣದಲ್ಲಿದ್ದು ಬೆಳೆದು ವೈದ್ಯಕೀಯ ವೃತ್ತಿ ಕಲಿತವರಾಗಿದ್ದರೆ, ಮಂತ್ರಿಗಳಿಗೆ ಬೇಕಾದವರಿಂದ ಶಿವಗೆರೆಯವರ ಸಂಬಂಧವನ್ನು ಯಾರಾದರೂ ಬಿಡುತ್ತಿದ್ದರೆ? ಆದರ್ಶವು ಸತ್ತುಹೋಗುತ್ತಿರುವ ಈ ಕಾಲದಲ್ಲಿ ಅದನ್ನು ಹಿಡಿದುಕೊಂಡು ಗಾಂಧೀಜಿ ಹೇಳಿದಂತೆ ಹಳ್ಳಿಯನ್ನು ಸೇರಿ ನಿಸ್ವಾರ್ಥದಿಂದ ಹೊರಟ ಶಿವಪ್ಪನ ಧೋರಣೆ ಜನಕ್ಕೆ ಅಚ್ಚರಿಯಾಗಿ ಕಂಡರೇನಾಶ್ಚರ್ಯವಿಲ್ಲ.

ರಾಜಕಾರಣದಲ್ಲಿ ಪ್ರಸಂಗಗಳು ಮೇಲ್ನೋಟಕ್ಕೆ ಕಾಣಿಸುವಷ್ಟು ಸರಳ ಇರುವುದಿಲ್ಲ. ಯಾರಿಗೇ ಸಹಾಯ ಮಾಡಿದರೂ ಕಾಣುವ ಒಂದು ಮುಖ ಇದ್ದರೆ ಕಾಣದ ಇನ್ನೊಂದು ಮುಖವಿರುತ್ತದೆ. ಸ್ನೇಹದ ಮಾತುಗಳನ್ನಾಡುತ್ತಲೆ ವಂಚನೆಯ 'ಬಲೆ' ನೇಯುತ್ತಾರೆ. ಇದಕ್ಕೆ ಶಿವಪ್ಪನ ವೃತ್ತಾಂತವನ್ನು ನೋಡಬಹುದು. ತನ್ನ ಪಾಡಿಗೆ ತಾನು ರೋಗಿಗಳಿಗೆ ಚಿಕಿತ್ಸೆ ಮಾಡಿಕೊಂಡು ಇದ್ದ ಶಿವಪ್ಪನನ್ನು ಧೂಮಕೇತುವಿನಂತೆ ಬಂದೆರಗಿದ ತುಮಕೂರಿನ ಅಡ್ವೋಕೇಟರು ಮತ್ತು ನಂಜಪ್ಪನವರು ಹಾಗೂ ಚಂದ್ರಮೌಳಿಗೌಡರು ಚುನಾವಣೆಗೆ ನಿಲ್ಲುವಂತೆ ಒತ್ತಾಯಿಸುತ್ತಾರೆ. ಶಿವಪ್ಪನನ್ನು ಒಪ್ಪಿಸುವುದಕ್ಕಾಗಿ ಆತನ ಸೇವೆ ಆದರ್ಶ, ತ್ಯಾಗಗಳ ಬಗೆಗೆ ಸ್ತುತಿಪರ ಮಾತುಗಳನ್ನಾಡುತ್ತಾರೆ. "ಈ ಪ್ರಾಂತ್ಯದಲ್ಲಿ ನಮ್ಮ ಹೆಸ್ರು ಎಷ್ಟಾಗ್ಯದೆ ಅಂತ ನಿಮ್ಗೇ ಗೊತ್ತಿಲ್ಲ ಸಾರ್, ನೀವು ಹೂ ಅಂತ ನಿಂತ್ಕಳಿ ಸಾಕು. ಎಲೆಕ್ಷನ್ ಖರ್ಚಿಗೆ ಯೋಚ್ನೆ ಮಾಡಬ್ಯಾಡಿ ಅದಕ್ಕಿಲ್ಲಿ ನಾವಿದ್ದೀವಿ" ಎನ್ನುತ್ತಾರೆ. ಶಿವಪ್ಪ ಚುನಾವಣೆಗೆ ನಿಂತುಕೊಳ್ಳುತ್ತಾನೆ. ಆದರೆ, ಶಿವಪ್ಪನನ್ನು ಚುನಾವಣೆಗೆ ನಿಲ್ಲಿಸಿದ್ದು ಆತನನ್ನು ಗೆಲ್ಲಿಸಲೆಂದು ಅಲ್ಲ. ನಾಗರವಳ್ಳಿಯವರಿಗೆ ಬರುವ ಮತಗಳನ್ನು ಒಡೆಯಲೆಂದು ಮಾತ್ರ ನಾಗರವಳ್ಳಿಯವರಿಗೆ ಅವರ ಪಕ್ಷದಲ್ಲೆ ವಿರುದ್ಧವಾದ ಒಂದು ಗುಂಪಿನವರು ಅವರನ್ನು ಸೋಲಿಸಲು ಹೂಡಿದ ಸಂಚಿಗೆ ಶಿವಪ್ಪ 'ಬಲಿ' ಪಶುವಾಗುತ್ತಾನೆ! ಅವರ ತಂತ್ರ ಫಲಿಸುತ್ತದೆ. ಚುನಾವಣೆಯಲ್ಲಿ ಶಿವಪ್ಪ ಮತ್ತು ನಾಗರವಳ್ಳಿಯವರಿಗೆ ಸೋಲಾಗುತ್ತದೆ. ಸಾದರವಳ್ಳಿಯವರ ಮಗ ಪ್ರಕಾಶ ಕುಮಾರ ಗೆಲ್ಲುತ್ತಾನೆ.

ರಾಜಕಾರಣದಲ್ಲಿ ಪ್ರಾಮಾಣಿಕತೆ, ವಿಶ್ವಾಸ, ನಿಸ್ವಾರ್ಥ ಮುಂತಾದ ಮಾತುಗಳಿಗೆ ಅರ್ಥವೇ ಇರುವುದಿಲ್ಲ. ಆದರ್ಶ ಧ್ಯೇಯ ಕಣ್ಣೆದುರೇ ಕೈ ಬಿಡಬೇಕಾಗಿ ಬರುತ್ತದೆ. ಸೇವೆ ಮಾಡುವ ಹಂಬಲವಿದ್ದರೂ ಅಸಹಾಯಕರಾಗಬೇಕಾಗುತ್ತದೆ. ಡಾ॥ ಶಿವಪ್ಪ ಚುನಾವಣೆಗೆ ನಿಂತ ಮೇಲೆ ಇಂಥ ಪರಿಸ್ಥಿತಿಗೆ ತುತ್ತಾಗುತ್ತಾನೆ. ಇಡತ ಎಂಬ ಹಳ್ಳಿಯಲ್ಲಿ ಎರಡು ಪಂಗಡಗಳಲ್ಲಿ ಹೊಡೆದಾಟವಾಗಿ ಗಾಯಗೊಂಡಿದ್ದ ಮಂತ್ರಿಗಳ

ಕಡೆಯವರಿಗೆ ಚಿಕಿತ್ಸೆ ಮಾಡಲು ಹೋದಾಗ ಚಿಕಿತ್ಸೆ ಮಾಡಕೂಡದೆಂದು ಶಿವಪ್ಪನ ಕಡೆಯ ರೈತರು ಹಟ ಹಿಡಿಯುತ್ತಾರೆ. ತಮ್ಮ ಮಾತು ಮೀರಿದರೆ ಆ ಊರಿನಲ್ಲಿ ಒಂದು ಓಟು ಅವನಿಗೆ ಬರುವುದಿಲ್ಲ ಎಂದು ಹೇಳುತ್ತಾರೆ.

ಈ ಸಂದರ್ಭದಲ್ಲಿ ಇದುವರೆಗೂ ಪಾಲಿಸಿಕೊಂಡು ಬಂದಿದ್ದ ವೈದ್ಯ ಧರ್ಮಕ್ಕೆ ವಿರೋಧವನ್ನು ತಾಳಿ ಶಿವಪ್ಪ ಚಿಕಿತ್ಸೆ ಮಾಡದೇ ಹೋಗುವ ನಿರ್ಧಾರ ಮಾಡುತ್ತಾನೆ. ಕಾಸು ಕೊಟ್ಟು ಓಟು ಕೊಳ್ಳುವ ಕೆಲಸಕ್ಕೆ ಶಿವಪ್ಪನ ವಿರೋಧವಿದ್ದರೂ ನಿಸ್ಸಹಾಯಕನಾಗಿ ಒಪ್ಪಿಕೊಳ್ಳಬೇಕಾಗುತ್ತದೆ. ಚುನಾವಣೆಗೆ ನಿಂತದ್ದರಿಂದಲೇ ಇಪ್ಪತ್ತು ದಿನ ಆಸ್ಪತ್ರೆಯನ್ನು ಮುಚ್ಚಬೇಕಾಗಿ ಬರುತ್ತದೆ. ಚುನಾವಣೆಯ ಕಾಲದಲ್ಲಿ ಟೈಫಾಯ್ಡ್ ಜ್ವರದಿಂದಾಗಿ ತಾಯಿ ಕಲ್ಲಮ್ಮನನ್ನು ಕಳೆದುಕೊಳ್ಳಬೇಕಾಗಿ ಬರುತ್ತದೆ.

"ಚುನಾವಣೆಯಲ್ಲಿ ಆದ ಸೋಲಿನಿಂದ ಅವನಿಗೆ ನಾಚಿಕೆ ಎನಿಸಲಿಲ್ಲ. ಮತ್ತೊಬ್ಬರ ರಾಜಕೀಯದ ಹಂಚಿಕೆಗೆ ತಾನು ಒಂದು ಸಾಧನವಾಗಿ ಬಲಿಯಾಗಬಾರದಾಗಿತ್ತು. ಜನರ ಸೇವೆ ಮಾಡುವ ತನ್ನ ದಾರಿಗೆ ಸರಿಯಾಗಿ ಕಂಡಿದ್ದರೆ ತಾನು ತುಮಕೂರಿನ ಅಡ್ವೋಕೇಟರ ಮಾತಿಗೆ ಮೋಸ ಹೋಗುತ್ತಿರಲಿಲ್ಲ ಎಂದು ಮನಸ್ಸಿನಲ್ಲಿಯೇ ಖೇದ ಪಡುತ್ತಿದ್ದ. ಚುನಾವಣೆಯ ಗಡಿಬಿಡಿಯಲ್ಲಿ ತಾನು ಸಕಾಲದಲ್ಲಿ ಚಿಕಿತ್ಸೆಗೆ ಹೋಗದಿದ್ದುದರಿಂದ ದುಗ್ಗೋನ ಹಳ್ಳಿಯ ಒಂದು ಬಡಕುಟುಂಬದ ಹೆಂಗಸು ಸತ್ತುದು ಅವನ ನೆನಪಿನಲ್ಲಿ ಸ್ಪಷ್ಟವಾಗಿ ಉಳಿದಿತ್ತು. ಸತ್ತ ಹೆಂಗಸಿನ ತಾಯಿ ಗೋಳಿಡುತ್ತಾ 'ಈಗ ಯಾಕಪ್ಪ ಬಂದೆ ಜವರಾಯ ಕೊಂಡೊಯ್ದುಮ್ಯಾಲೆ? ಅವನ ಕಿವಿಯಲ್ಲಿ ಈಗಲೂ ಕೇಳಿಸುತ್ತಿದೆ. ತಾನು ಎಲೆಕ್ಷನ್ನಿನಲ್ಲಿ ಗೆದ್ದಿದ್ದರೂ ಆ ಹೆಂಗಸನ್ನು ಉಳಿಸಿದ್ದುದರ ಸಮ ಆಗ್ತಿರಲಿಲ್ಲ ಎಂದು ಅವನು ಯೋಚಿಸುತ್ತಾನೆ. ಸೋತರೂ ಚುನಾವಣೆಯಲ್ಲಿ ಸ್ಪರ್ಧಿಸಿದುದರಿಂದ ಅವನಿಗೆ ಒಂದು ದೊಡ್ಡ ಉಪಯೋಗವಾಗಿತ್ತು. ಅವನಿಗೆ ಹಳ್ಳಿಗಳ ನಿಜವಾದ ಪರಿಚಯವಾಗಿತ್ತು. ಇದುವರೆಗೂ ಅವನು ಕೇವಲ ಆದರ್ಶದ ದೃಷ್ಟಿಯಿಂದ ಇಡೀ ಹಳ್ಳಿಗಳನ್ನು ನೋಡುತ್ತಿದ್ದ. ಬಡವ ಬಲ್ಲಿದರೆಂಬ ಭೇದವಿಲ್ಲದೆ ಎಲ್ಲರಿಗೂ ಶುಶ್ರೂಷೆ ಮಾಡುತ್ತಿದ್ದ. ಹಳ್ಳಿ ಎಂದರೆ ಬರೀ ಬಡವರಿಂದ ಕೂಡಿಲ್ಲ; ಅಲ್ಲಿ ಉಳ್ಳವರೂ ಇದ್ದಾರೆ, ಅಪರೂಪಕ್ಕಾದರೂ ಶ್ರೀಮಂತರೂ ಇದ್ದಾರೆ ಎಂಬ ಸಂಗತಿ ಅವನಿಗೆ ಮನದಟ್ಟಾಯಿತು. ನಿಜವಾದ ಸಾಮಾಜಿಕ ಪ್ರಜ್ಞೆ ಇದ್ದರೆ ಹಳ್ಳಿಯಲ್ಲಿರುವ ಗಟ್ಟಿಕುಳಗಳೇ ಸರ್ಕಾರದ ನೆರವೇ ಇಲ್ಲದೆ ಹಳ್ಳಿಗಳ ಉದ್ಧಾರ ಮಾಡಬಹುದು ಎಂದು ಅವನು ತಿಳಿದ. ಗ್ರಾಮಾಂತರ ಪ್ರದೇಶದ ಸರ್ವಾಂಗೀಣ ಉನ್ನತಿಯನ್ನು ಸಾಧಿಸುವ ಅಸಾಧ್ಯ ಆದರ್ಶವು ಅವನಿಗೆ ಉಂಟಾಗಲಿಲ್ಲ. ತನ್ನ ದಾರಿಯಲ್ಲಿ ತನಗೆ ಶಕ್ಯವಿದ್ದಂತೆ ಮಾತ್ರವೇ ಏನಾದರೂ ಸೇವೆ ಮಾಡುವುದು ಸಾಧ್ಯ ಎಂಬುದು ಅವನ ತಿಳುವಳಿಕೆಗೆ ಬಂದಿತ್ತು".[೧]

---

೧. ಮತದಾನ – ಎಸ್.ಎಲ್. ಭೈರಪ್ಪ – ಪುಟ – ೧೫೫

ಹಿಂದೊಮ್ಮೆ ತಾನು ಮದುವೆಯಾಗಲು ಅಪೇಕ್ಷೆ ಪಟ್ಟಿದ್ದ ರಾಮಲಿಂಗೇಗೌಡರ ಎರಡನೆಯ ಮಗಳು ರಂಗಲಕ್ಷ್ಮಿಯು ಮೈಸೂರಿನ ಆಸ್ಪತ್ರೆಯಲ್ಲಿ ನರ್ಸಾಗಿ ತರಬೇತಿ ಪಡೆಯುತ್ತಿರುತ್ತಾಳೆ. ಅಲ್ಲಿ ಸಿಕ್ಕಾಗ ಶಿವಪ್ಪನಿಗೆ ಹಿಂದಿನ ಆಕರ್ಷಣೆ ಮರುಕಳಿಸುತ್ತದೆ. ಈಗ ಮದುವೆ ಆಗುವ ತನ್ನ ಇಂಗಿತವನ್ನು ಹೇಳಿಕೊಳ್ಳುತ್ತಾನೆ. ರಂಗಲಕ್ಷ್ಮಿಯು ಆತನ ಇಂಗಿತದ ಬಗ್ಗೆ ಚಿಂತಿಸುತ್ತಾಳೆ. ಶಿವಪ್ಪನ ಧ್ಯೇಯ, ಆದರ್ಶ ನಡವಳಿಕೆಯ ಬಗ್ಗೆ ಮೊದಲಿನಿಂದಲೂ ಅವಳಿಗೆ ಅಭಿಮಾನ, ಆಕರ್ಷಣೆಗಳು ನಡೆಯುತ್ತವೆ. ಆತನ ಸೇವಾ ಜೀವನದಲ್ಲಿ ಸಹಧರ್ಮಿಣಿಯಾಗಿ ದುಡಿಯಲು ಒಪ್ಪುತ್ತಾಳೆ.

ಜನತಾ ಸೇವೆಯನ್ನು ಸಲ್ಲಿಸಲು ಹಿಂದೆ ಎಂದೋ ಇಂಥವಳನ್ನು ಮದುವೆ ಮಾಡಿಕೊಳ್ಳಬೇಕಾಗಿದ್ದ ತನಗೆ ಈಗ ಇಂಥ ಹೆಂಡತಿಯ ಅವಶ್ಯಕತೆ ಇದೆ ಎಂದು ಒಂದು ಧ್ಯೇಯ ಸಾಧನೆಗಾಗಿ ರಂಗಲಕ್ಷ್ಮಿಯ ಕೈ ಹಿಡಿಯಬೇಕೆನ್ನುವ ಶಿವಪ್ಪನ ವಿಚಾರ ಬಹಳಷ್ಟು ಆಳದಿಂದ ಕೂಡಿದ್ದಾಗಿದ್ದರ ಜೊತೆಗೆ ಭೈರಪ್ಪನವರ ತಾತ್ವಕತೆ ಕೊನೆಯಲ್ಲಿ ಮೈಯೆತ್ತಿ ನಂತದ್ದು ಕಂಡುಬರುತ್ತದೆ.

**ಸಾದರವಳ್ಳಿಯ ಸಂಬೇಗೌಡರು :** ಇವರು ಮಹಾರಾಜರ ಕಾಲದಲ್ಲಿ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದವರು. ಕಾಂಗ್ರೆಸ್ ಸರ್ಕಾರ ಬಂದ ಮೇಲಷ್ಟೆ ಅವರ ಸದಸ್ಯತ್ವ ಹೊರಟು ಹೋದದ್ದು. ಆದರೂ ಅವರನ್ನು ಸುತ್ತಮುತ್ತಲ ಹಳ್ಳಿಗಳವರು ಅಸೆಂಬ್ಲಿ ಸಂಬಣ್ಣನೋರು ಎಂದೇ ಕರೆಯುತ್ತಾರೆ. ಆ ಪ್ರಾಂತ್ಯದ ಇತರ ಮುಖಂಡರು ತುಮಕೂರನ್ನು ನೋಡುವ ಮೊದಲೇ ಸಂಬೇಗೌಡರು ಬೆಂಗಳೂರು ಕಂಡವರು. ಆ ಕಾಲದಲ್ಲಿಯೇ ತಮ್ಮ ಮನೆಯನ್ನು ನಾಗರೀಕತೆಗೆ ಪರಿವರ್ತಿಸಿದ್ದರು. ಸಾದರಹಳ್ಳಿಯ ರಂಗೇಗೌಡರ ಮಗ ಸಂಬೇಗೌಡ ಎಂಬ ತಮ್ಮ ಹೆಸರನ್ನು ಆ ಕಾಲದಲ್ಲಿಯೇ ಎಸ್.ಆರ್. ಸಾದರವಳ್ಳಿ ಎಂದು ಪರಿವರ್ತಿಸಿಕೊಂಡಿದ್ದರು. ದೇಶದಲ್ಲಿ ಕಾಂಗ್ರೆಸ್ ಸೇರಲು ಒಮ್ಮೆ ಮನಸ್ಸು ಮಾಡಿದರು ಆದರೆ ಸಾದರವಳ್ಳಿಯವರ ಕರಾರುಗಳಿಂದಾಗಿ ಅವರು ಕಾಂಗ್ರೆಸ್‌ಗೆ ಸೇರಲು ಸಾಧ್ಯವಾಗಲಿಲ್ಲ. ಆದರೆ ಸಾದರವಳ್ಳಿಯವರು ಸುಮ್ಮನಿರುತ್ತಾರೆಯೇ ಅವರು ತಾವೇ ಬೇರೊಂದು ಪಕ್ಷ ಕಟ್ಟಿದರು. ಅದಕ್ಕೆ 'ಜನತಾ ಸೇವಕ ಪಕ್ಷ' ಎಂದು ಹೆಸರಿಟ್ಟರು.

ಸಾದರವಳ್ಳಿಯವರು ತಮ್ಮ ಮಗಳನ್ನು ಡಾ॥ ಶಿವಪ್ಪನಗೆ ಕೊಡಲು ಮುಂದೆ ಬರುತ್ತಾರೆ. ಆದರೆ ಶಿವಪ್ಪ ಇದಕ್ಕೆ ಒಪ್ಪಿಗೆ ಕೊಡುವುದಿಲ್ಲ. ಸಾದರವಳ್ಳಿಯವರು ಚುನಾವಣೆಗೆ ತಮ್ಮ ಮಗ ಪ್ರಕಾಶ ಕುಮಾರನನ್ನು ನಿಲ್ಲಿಸಿ ಗೆಲ್ಲಿಸುತ್ತಾರೆ. ಅಪ್ಪಾಜಿಯವರೂ ಸಾದರವಳ್ಳಿಯವರೂ ಈ ಮತದಾರ ಕ್ಷೇತ್ರದಲ್ಲಿ ಸಮಹುದ್ದರಿಗಳು ಇಬ್ಬರೂ ಒಂದೇ ಕೋಮಿನವರು.

ಒಬ್ಬರ ವಿರುದ್ಧ ಇಬ್ಬರನ್ನು ನಿಲ್ಲಿಸಿ ಮತ ಒಡೆಯುವ ಹವಣಿಕೆ ಇದೆ. ಮಂತ್ರಿ ಅಪ್ಪಾಜಿಯವರಿಗೆ ಸಲ್ಲುವ ಕೆಲ ಮತಗಳು ಜನಪ್ರಿಯ ಡಾ॥ ಶಿವಪ್ಪನಿಗೆ ಸಂದಿಯೇ ಸಂದುತ್ತವೆ. ಅಲ್ಲಿ ಮಂತ್ರಿ ಅಪ್ಪಾಜಿಯ ಖಾಯಂ ಮತಗಳು ಒಡೆಯತ್ತವೆ. ಅವರ ಜೋಳಿಗೆಗೆ ಬೀಳುವ ಲಿಂಗಾಯತರ ಮತಗಳನ್ನು ಅವರಿಂದ ಕಸಿಯಬೇಕಾದರೆ ಲಿಂಗಾಯತ ಕೋಮಿನ ಗುರುಮಲ್ಲೇಗೌಡ ಒಬ್ಬ ಅಭ್ಯರ್ಥಿ. ಹೀಗೆ ಮಂತ್ರಿ ಅಪ್ಪಾಜಿಯವರು ಮತಗಳು ಹಂಚಿಹೋಗಿ ತಾವು ಗೆಲ್ಲುವುದು ಸುಲಭವಾಗುತ್ತದೆಂದು ಸಾದರವಳ್ಳಿಯವರ ತಂತ್ರ. ಹದಿನೈದು ವರ್ಷ ಅಸೆಂಬ್ಲಿ ಮೆಂಬರ್ ಆಗಿದ್ದುದರ ಅನುಭವ ಇದು ಕೊನೆಗೂ ಸಾದರವಳ್ಳಿಯವರ ತಂತ್ರ ಫಲಿಸಿತು ಹಾಗಾಗಿ ಚುನಾವಣೆಯಲ್ಲಿ ಅವರ ಮಗ ಪ್ರಕಾಶ ಕುಮಾರನು ಗೆದ್ದನು.

ನಾಗರವಳ್ಳಿಯವರ ಪಾತ್ರವು ಇಂದಿನ ರಾಜಕಾರಣಿಗಳ ಪ್ರತಿರೂಪವಾಗಿ ಮೂಡಿಬಂದಿದೆ. ಇವರು ಕಂಟ್ರಾಕ್ಟರ್ ರಾಮಲಿಂಗೇಗೌಡರ ಜೊತೆಗೆ ಬಹಳ ಸ್ನೇಹದಿಂದ ಆತ್ಮೀಯತೆಯಿಂದ ಇದ್ದರೂ ಕೂಡ ರಾಮಲಿಂಗೇಗೌಡರು ಕೊಟ್ಟ ಹಣವನ್ನು ವಾಪಸು ಕೊಡದೆ ತನ್ಮೂಲಕ ಅವರ ಆತ್ಮಹತ್ಯೆಗೆ ಕಾರಣರಗುತ್ತಾರೆ. ರಾಜಕಾರಣಿಯಾದವನು ಸದಾ ತನ್ನ ಸ್ವಂತ ಲಾಭದ ಹಿತದೃಷ್ಟಿ ಇಟ್ಟುಕೊಂಡೇ ಪ್ರತಿಯೊಂದು ಕೆಲಸಕ್ಕೂ ತನ್ನ ಪ್ರತಿಕ್ರಿಯೆ ವ್ಯಕ್ತಪಡಿಸುತ್ತಾನಾಗಲೀ ಅದರಿಂದ ಬೇರೆಯವರಿಗೆ ಆಗುವ ಪ್ರಯೋಜನದ ಬಗ್ಗೆ ಅವನಿಗೆ ನಿಕೃಷ್ಟ ಭಾವನೆ ಇರುತ್ತದೆ. ಇದಕ್ಕೆ ನಾಗರವಳ್ಳಿಯವರ ಪಾತ್ರವನ್ನೇ ಉದಾಹರಿಸಬಹುದು. ಸಾದರಹಳ್ಳಿಯವರ ಮಗ ಪ್ರಕಾಶ ಕುಮಾರನಿಗೆ ಮಗಳನ್ನಿತ್ತು ನೆಂಟಸ್ತಿಕೆ ಮಾಡಲು ರಾಮಲಿಂಗೇಗೌಡರು ನಿಶ್ಚಯಿಸಿದಾಗ ಆ ನೆಂಟಸ್ತಿಕೆ ಆಗದಂತೆ ಸಚಿವ ನಾಗರವಳ್ಳಿಯವರು ತಡೆಯುತ್ತಾರೆ. ಒಂದು ಕಾಲಕ್ಕೆ ವಿಧಾನಸಭೆಯ ಸದಸ್ಯರಾಗಿದ್ದು ಸುತ್ತ ಹಳ್ಳಿಗಳಿಗೆಲ್ಲ ಹೆಸರುವಾಸಿಯಾಗಿದ್ದ ಸಾದರವಳ್ಳಿಯವರಿಗೂ ತಮ್ಮ ಬೆಂಬಲಿಗ ಶಿವಗೆರೆ ಕಂಟ್ರಾಕ್ಟರ್ ರಾಮಲಿಂಗೇಗೌಡರಿಗೂ ನೆಂಟಸ್ತಿಕೆ ಬಂದು ಇವೆರಡೂ ಮನೆತನಗಳು ಒಂದಾದರೆ ಮುಂದಿನ ಚುನಾವಣೆಯಲ್ಲಿ ರಾಮಲಿಂಗೇಗೌಡನ ಬೆಂಬಲ ತಮಗೆ ತಪ್ಪಿ ಸಾದರವಳ್ಳಿಯವರಿಗೆ ಸಿಗುತ್ತದೆ. ಇದರಿಂದ ತನ್ನ ಬೇಳೆ ಬೇಯುವುದಿಲ್ಲವೆಂದು ದುರಾಲೋಚಿಸಿ 'ಸಾದರವಳ್ಳಯೋರ ಸಂಬಂದ ನಮಗೆ ಇಷ್ಟವಿಲ್ಲ. ಇದರ ಮೇಲೆ ನಿಮ್ಮ ಇರ್‍ಯಾದೆ' ಎಂದು ಚಾಡಿ ಮಾತಿನ ಕಿಡಿ ಹಾಕಿ ಶಿವಗೆರೆಯವರಿಗೆ ತಮ್ಮ ಅಸಮ್ಮತಿ ಸೂಚಿಸಿ ಈ ನೆಂಟಸ್ತಿಕೆ ನಡೆಯದಂತೆ ತಡೆಯುತ್ತಾರೆ. ಈ ಪಾತ್ರದ ಮೂಲಕ ಭೈರಪ್ಪನವರು ಇಂದಿನ ರಾಜಕಾರಣಿಯ ಚಿತ್ರಣವನ್ನು ಅಂದರೆ ತಮ್ಮ ಬೆಂಬಲಿಗರನ್ನು ತಮ್ಮ ಅವಶ್ಯಕತೆಗಳಿಗನುಗುಣವಾಗಿ ಹೇಗೆ ಬಳಸಿಕೊಳ್ಳುತ್ತಾರೆಂಬುದನ್ನು ಚಿತ್ರಿಸಿದ್ದಾರೆ.

**ಕಂಟ್ರಾಕ್ಟರ್ ಶಿವಗೆರೆ ರಾಮಲಿಂಗೇಗೌಡರು :** ಇವರು ಸಾದರವಳ್ಳಿಯವರಂತೆ ಭಾರೀ ಜಮೀನುದಾರರಲ್ಲ ಮೂವತ್ತೆಂಟು ರೂಪಾಯಿ ಕಂದಾಯದ ಕುಳ, ಇವರು ತಮ್ಮ ಮನೆ ಕಟ್ಟಿಸಿದಾಗ ಬಂದ ಅನುಭವದಿಂದ ಅವರು ಜಿರಯತಿನ ಜೊತೆಗೆ ಸಣ್ಣಪುಟ್ಟ ಕಂಟ್ರಾಕ್ಟ್ ಕೆಲಸಗಳನ್ನು ಮಾಡಿಸತೊಡಗಿದರು. ಸಾದರವಳ್ಳಿಯವರಂತೆ ಡಾ॥ ಶಿವಪ್ಪನಿಗೆ ತನ್ನ ಮಗಳನ್ನು ಮದುವೆ ಮಾಡಿಕೊಳ್ಳಲು ಮುಂದೆ ಬಂದವರು. ರಾಮಲಿಂಗೇಗೌಡರು ಮೊದಲ ಸಲ ನಡೆದ ಚುನಾವಣೆಯಲ್ಲಿ ನಲವತ್ತು ಹಳ್ಳಿಗಳ ಮತಗಳು ಒಂದು ಉಂಡೆಯಾಗಿ ನಾಗರವಳ್ಳಿಯವರಿಗೆ ದೊರೆಯುವಂತೆ ಮಾಡಿದುದರಿಂದ, ಕಂಟ್ರಾಕ್ಟರಿಗೆ ಮನಸದಟ್ಟು ಮಾಡಿಕೊಂಡರು.

ಮಂತ್ರಿ ಮತ್ತು ಕಂಟ್ರಾಕ್ಟರ ಸಖ್ಯದಿಂದ ಜನಗಳಿಗೆ ಬಹಳ ಉಪಯೋಗವು ಆಯಿತು. ತಮಗೆ ಓಟು ಕೊಟ್ಟ ಮತದಾರರ ಕ್ಷೇತ್ರಕ್ಕೆ ಸಹಾಯ ಮಾಡಬೇಕೆಂಬ ವ್ಯವಹಾರ ಜ್ಞಾನವು ಮಂತ್ರಿಗಳಿಗೆ ಇತ್ತು. ಈ ಕ್ಷೇತ್ರದ ಹಳ್ಳಿಗಳಿಗೆ ಸ್ಕೂಲುಗಳು, ಒಡೆದುಹೋದ ಕೆರೆಕಟ್ಟೆಗಳ ದುರಸ್ತಿ, ಹೊಸ ರಸ್ತೆಗಳ ನಿರ್ಮಾಣ, ಜಮೀನು ಅಭಿವೃದ್ಧಿ ಸಾಲಗಳ ಸೌಲಭ್ಯ, ಮೊದಲಾಗಿ ಸಾಕಷ್ಟು ಧಾರಾಳವಾಗಿ ದೊರೆತವು. ಕೆಲಸಗಳ ಕಂಟ್ರಾಕ್ಟರುಗಳನ್ನೆಲ್ಲ ರಾಮಲಿಂಗೇಗೌಡರೇ ಮಾಡುತ್ತಿದ್ದರು.

ಮುಂದೆ ಇದೇ ನಾಗರವಳ್ಳಿಯವರು ಚುನಾವಣೆಯಲ್ಲಿ ಪ್ರಕಾಶ ಕುಮಾರನಿಗೆ ಸೋತಾಗ: ಅವರ ಚುನಾವಣಾ ವೆಚ್ಚಕ್ಕೆ ತನ್ನಲ್ಲಿದ್ದ ಹತ್ತು ಸಾವಿರದ ಜೊತೆಗೆ ಜಮೀನು ಅಡವಿಟ್ಟು ಹಣವನ್ನು ಕೊಟ್ಟಿದ್ದನು. ರಾಮಲಿಂಗೇಗೌಡರು ತನಗೆ ಕಷ್ಟ ಬಂದದ್ದರಿಂದ ಆ ಹಣ ಕೇಳಲು ಮನೆಗೆ ಬಂದಾಗ ಮನೆಯಲ್ಲಿ ಇದ್ದೂ ಸಹ ಇಲ್ಲವೆನ್ನಿಸಿಕೊಳ್ಳುತ್ತಾರೆ. ಆಗ, ರಾಮಲಿಂಗೇಗೌಡರು "ಲೇ. ನನ್ ಹೆಂಡ್ತಿ ಮಗನೇ ನಾಚಿಕೆ ಇಲ್ದೆ ಒಳಗ್ ಕುಂತ್‌ಕಂಡ್ ಎಂಗುಸ್ರ ಕೈಲಿ ಏಳಿಕಳುಸ್ತಿ ಏನೋ? ಎದ್ದ್ ಈಚೆಕಡಿಕ್ ಬಾರ್ಲ್ರಾ"[7] ಎಂದು ಕೂಗುತ್ತಾರೆ. ಆದರೂ ನಾಗರವಳ್ಳಿಯವರು ಹೊರಗೆ ಬರುವುದಿಲ್ಲ ತನ್ಮೂಲಕ ರಾಮಲಿಂಗೇಗೌಡರು ಕೆರೆಯಲ್ಲಿ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳಲು ಕಾರಣರಾಗುತ್ತಾರೆ! ಇದು ರಾಜಕಾರಣದ ಕೃತಜ್ಞತೆ(!)ಯ ಮುಖ!

**ಪುಟ್ಟತಮ್ಮಯ್ಯ :** ಪುಟ್ಟತಮ್ಮಯ್ಯ ಒಂದು ವಿಶಿಷ್ಟ ಪಾತ್ರವೇ ಸರಿ. ಇಲ್ಲಿಯವರೆಗೆ ಭೈರಪ್ಪನವರ ಕಾದಂಬರಿಗಳಲ್ಲಿ ಬಂದ ಪುರುಷ ಪಾತ್ರಗಳೆಲ್ಲ ಆತ್ಮ ವಿಶ್ವಾಸದಲ್ಲಿ ಅದ್ದಿ ತೆಗೆದಂತಹವು. ಪುಟ್ಟತಮ್ಮಯ್ಯನಿಗೆ ಮಾವ ರಾಮಲಿಂಗೇಗೌಡರ ಮಂತ್ರಿ ಅಪ್ಪಾಜಿಯವರ ಸಹಾಯವಿಲ್ಲದೆ ವ್ಯಕ್ತಿತ್ವವೇ ಇಲ್ಲ.

ಹಳ್ಳಿಯಲ್ಲೇ ಹುಟ್ಟಿ ಬೆಳೆದು ನಾಲ್ಕು ದಿನ ಪಟ್ಟಣಕ್ಕೆ ಹೋಗಿ ಓದಿ, ಇಂಗ್ಲೀಷ್ ಮಾತ್ರ ಕಲಿತು ಮೂಲತಃ ಹಳ್ಳಿಯವರೇ ಆಗಿ ಉಳಿದಿರುವ ಕ್ರಾಪು ಬಿಟ್ಟ ಹುಡುಗರ ಜಾತಿಗೆ ಸೇರಿದವನು ಪುಟ್ಟತಮ್ಮಯ್ಯ. ಅವನು ಪಟ್ಟಣದ ಮೋಟಾರು, ದರ್ಜಿಗಳು, ಫೋಟೋಗ್ರಾಫರು ಮತ್ತು ಕುರ್ಚಿ ಮೇಜುಗಳನ್ನು ಕಂಡಿದ್ದನೇ ವಿನಾಃ ಅಲ್ಲಿಯ ಬೌದ್ಧಿಕ ಜೀವನ, ದೃಷ್ಟಿ, ವೈಶಾಲ್ಯ, ಸಾಂಸ್ಕೃತಿಕ ಚಟುವಟಿಕೆಗಳು, ಸಂಗೀತ, ಸಾಹಿತ್ಯ ಮತ್ತು ಹೊಸ ಆಚಾರ ವಿಚಾರಗಳನ್ನು ಅರಿತಿರಲಿಲ್ಲ. ಸ್ವಲ್ಪಮಟ್ಟಿಗೆ ಅವು ತಿಳಿದಿದ್ದರೂ ಅವು ಅವನಿಗೆ ಸೇರುತ್ತಿರಲಿಲ್ಲ. ಮೂಲತಃ ಅವನಿಗೂ ರಾಮಲಿಂಗಪ್ಪನವರಿಗೂ ಹೆಚ್ಚು ವ್ಯತ್ಯಾಸವಿರಲಿಲ್ಲ. ಆದರೆ, ರಾಮಲಿಂಗಪ್ಪನವರಿಗೆ ಅವನಂತೆ ಸ್ವಪ್ರತಿಷ್ಠೆಯ ರೋಗವು ಮೇರೆ ಮೀರಿ ಬೆಳೆದಿರಲಿಲ್ಲ. ಇಂಗ್ಲೀಷೂ ಬರುತ್ತಿರಲಿಲ್ಲ.

ರಾಮಲಿಂಗೇಗೌಡರ ಮೊದಲನೆಯ ಮಗಳಾದ ಕೆಂಪಲಕ್ಷ್ಮಿಯನ್ನು ಪುಟ್ಟತಮ್ಮಯ್ಯನು ಮದುವೆಯಾಗುತ್ತಾನೆ. ಈತ ಡಾ॥ ಶಿವಪ್ಪನ ಅಕ್ಕ ಪುಟ್ಟಕ್ಕನ ಮೈದುನ ತನ್ನ ಅಕ್ಕನ ಚೆಲುವೆ ಮಗಳನ್ನು ಬಿಟ್ಟು ಕೆಂಪಲಕ್ಷ್ಮಿಯನ್ನೇ ಮದುವೆಯಾದ ಕಾರಣ, ಮಂತ್ರಿಗಳಾದ ಅಪ್ಪಾಜಿಯವರ ಪ್ರೀತಿ ಸಂಪಾದಿಸಿದ ಕಂಟ್ರಾಕ್ಟರರಿಂದ ತನಗೆ ಮೇಲಿನ ಹುದ್ದೆ, ಮರ್ಯಾದೆ ಸಿಗುವುದು ಎಂದು ಆದರೆ, ಮುಂದೆ ಅವಳ ಎರಡನೆಯ ಹೆರಿಗೆ ಸರಿಯಾಗಿ ಆಗದೆ ಸತ್ತು ಹೋದದ್ದರಿಂದ ಸರಕಾರದಲ್ಲಿ ರಂಗಲಕ್ಷ್ಮಿಯನ್ನು ಶನಿಯಂತೆ ಗಂಟುಬಿದ್ದು ಮಕ್ಕಳಂತೆ ಅತ್ತು ಕರೆದು ಅಂಗಲಾಚಿ ಕಾಲಿಗೆ ಬಿದ್ದು ಬೇಡಿ ಮದುವೆ ಮಾಡಿಕೊಂಡೇಬಿಡುವ ಪುಟ್ಟತಮ್ಮಯ್ಯನ ರಾಜಕೀಯತನ ಇವತ್ತಿನ ಸಮಾಜವನ್ನು ಪ್ರತಿನಿಧಿಸುವುದು. ಈ ಸಂಬಂಧವನ್ನು ಮಾಡಿಯೇ ತೀರಬೇಕೆಂದು ಪುಟ್ಟತಮ್ಮಯ್ಯನ ಸೋದರವರ್ಗವು ಬಂದು ರಾಮಲಿಂಗೇಗೌಡರಿಗೂ ಅವರ ಕುಟುಂಬಕ್ಕೂ ಕಾಡಿ ಬೇಡುವುದು ಕನ್ಯೆ ಪಡೆವ ಪುಟ್ಟತಮ್ಮಯ್ಯ ಒಂದು ಸಲವಲ್ಲ ಎರಡು ಸಲ ಹಸಿ ಅವರೇಕಾಯಿ ಕೊಟ್ಟು ಮಂತ್ರಿಗಳ ಕಡೆಯಿಂದ ರಾಮಲಿಂಗೇಗೌಡರಿಗೆ ಕನ್ಯೆ ಕೊಡಬೇಕೆಂದು ಹೇಳಿಸುವುದೂ ಬಲು ಮೋಜಿನಿಂದ ಕೂಡಿದೆ.

ರಾಮಲಿಂಗೇಗೌಡರ ಸಹಾಯದಿಂದ ಕೆಲಸವನ್ನು ಪಡೆದುಕೊಳ್ಳುವುದರ ಜೊತೆಗೆ ಬಹಳ ಅನುಕೂಲಗಳನ್ನು ಮಾಡಿಕೊಂಡ ಪುಟ್ಟತಮ್ಮಯ್ಯ ಅವರಿಗೆ ಕಷ್ಟ ಬಂದಾಗ ನೆರವಾಗುವುದಿಲ್ಲ. ರಾಮಲಿಂಗೇಗೌಡರು ಸಾಲ ಮಾಡಿ ಅದನ್ನು ತೀರಿಸಲು ತಾನೇ ಕಟ್ಟಿಸಿಕೊಟ್ಟಿದ್ದ ಮನೆಯನ್ನು ಮಾರಲು ಕೇಳಿದಾಗ ಅದಕ್ಕೆ ಪುಟ್ಟತಮ್ಮಯ್ಯ ಒಪ್ಪುವುದಿಲ್ಲ.

ಮಾವ ಮತ್ತು ಮಾವನ ಮನೆಯವರ ವಿಷಯದಲ್ಲಿ ಭಯ ಭಕ್ತಿ ಇದ್ದರೂ ಪುಟ್ಟತಮ್ಮಯ್ಯನಿಗೆ ಆಗಾಗ್ಗೆ ಹೆಂಡತಿಯ ಮೇಲೆ ಕೋಪ ಬರದೆ ಇರುತ್ತಿರಲಿಲ್ಲ. ಕೋಪ ಬಂದಾಗ ಅವನು ತನಗೆ ತಿಳಿದ

ಮಾತುಗಳಲ್ಲಿ ಹೆಂಡತಿಯನ್ನು ಬೈದು, ಇನ್ನೂ ರೇಗಿದರೆ ಒಂದೆರಡು ಏಟುಗಳನ್ನೂ ಕೊಡುತ್ತಿದ್ದ. ಇಂದಿನ ಬಹುಜನರನ್ನು ಹೋಲುವ ವ್ಯಕ್ತಿತ್ವ ಹೀನ ವ್ಯಕ್ತಿ ಪುಟ್ಟತಮ್ಮಯ್ಯನು ಮೊದಲಿನ ಹೆಂಡತಿ ಕೆಂಪಲಕ್ಷ್ಮಿಯನ್ನು ನೆನಪಿಸಿಕೊಂಡಂತೆಯೇ ಎರಡನೆಯ ಹೆಂಡತಿಯೊಂದಿಗೆ ನಡೆದುಕೊಳ್ಳಲು ಹೋಗಿ 'ನಿಮಗೆ ಬೇಕಾದ್ರೆ ನಾನು ಕಾಗದದಲ್ಲಿ ಬರಕೊಡ್ತೀನಿ. ನೀವು ಸುಖವಾಗಿ ಯಾವ ಮಿನಿಷ್ಟರ್ ಮಗಳನ್ನಾದರೂ ಮದುವೆ ಮಾಡ್ಕಳ್ಳಿ' ಎಂದು ಹೇಳಿಸಿಕೊಳ್ಳುವ ಹೇಡಿ ಗಂಡನಾಗಿದ್ದ.

**ರಂಗಲಕ್ಷ್ಮಿ:** ಮೊದಲಿನ ಗಂಡನಿಂದ ಬಿಡುಗಡೆ ಪಡೆದು ತಾನು ಮನಸಾರೆ ಬಯಸಿದ ಪ್ರೇಮಿಯನ್ನು ಮದುವೆಯಾಗುವ ಸ್ವಾತಂತ್ರ್ಯ ವಹಿಸಿದ ಮೊದಲ ಹೆಣ್ಣು ಪಾತ್ರ ರಂಗಲಕ್ಷ್ಮಿ. ಭೈರಪ್ಪನವರ ಹೆಣ್ಣು ಪಾತ್ರಗಳಲ್ಲೊಂದು ವಿಶಿಷ್ಟ ರಚನೆ. ರಂಗಲಕ್ಷ್ಮಿಯು ಶಿವಗೆರೆ ಕಂಟ್ರಾಕ್ಟರ ಎರಡನೆಯ ಮಗಳು. ಈಕೆಯ ಅಕ್ಕ ಕೆಂಪಲಕ್ಷ್ಮಿಯನ್ನು ಪುಟ್ಟತಮ್ಮಯನಿಗೆ ಮದುವೆ ಮಾಡಿರುತ್ತಾರೆ. ಆಕೆ ತೀರಿಕೊಂಡ ನಂತರ ರಂಗಲಕ್ಷ್ಮಿಯನ್ನು ಕೂಡ ಪುಟ್ಟತಮ್ಮಯ್ಯನಿಗೆ ಕೊಟ್ಟು ಮದುವೆ ಮಾಡುತ್ತಾರೆ.

ಅವನ ಸ್ವಭಾವ ಅವಳಿಗೆ ಮೊದಲೇ ಗೊತ್ತಿತ್ತು. ಅಕ್ಕನ ಮನೆಗೆಂದು ಬೆಂಗಳೂರಿಗೆ ಮೊದಲು ಹೋಗುತ್ತಿದ್ದಳು. ನಾದಿನಿಯ ಬಗೆಗೆ ಅವನು ತುಂಬ ಮುತುವರ್ಜಿ ವಹಿಸಿದರೂ ಅದು ನಿಜವಾದ ಅಂತಃಕರಣದಿಂದ ಕೂಡಿದ ಭಾವನೆಯಲ್ಲವೆಂಬುದನ್ನು ಅವಳು ಗುರ್ತಿಸಿದ್ದಳು. ಮೊದಲಿನಿಂದ ಸಿಕ್ಕಿದಷ್ಟು ಕತೆ ಕಾದಂಬರಿಗಳನ್ನು ಓದಿದ್ದ ರಂಗಲಕ್ಷ್ಮಿಗೆ ಸ್ವತಃ ಕೆಲವು ಮಟ್ಟಿನ ವಿಚಾರಶಕ್ತಿಯೂ ಬೆಳೆದಿತ್ತು. ಜೀವನದಲ್ಲಿ ಯಾವುದು ಒಳ್ಳೆಯದು, ಯಾವುದು ಕೆಟ್ಟದ್ದು, ಮನುಷ್ಯ ಯಾವುದಕ್ಕಾಗಿ ಬದುಕಬೇಕು ಎಂಬ ಬಗೆಗೆ ತನಗೆ ತಿಳಿದಂತೆ ಕೆಲವು ಆದರ್ಶಗಳನ್ನು ಕಲ್ಪಿಸಿಕೊಂಡಿದ್ದಳು: ಅವಳನ್ನು ನೋಡಲು ಮೊದಲು ಸಲ ಡಾ॥ ಶಿವಪ್ಪ ಬಂದಾಗ ಅವಳು ಕೆಲವು ಜನರಿಂದ ಅವರ ಜನಸೇವೆಯನ್ನು ಕೇಳಿದ್ದಳು. ಅವರೆಷ್ಟು ದೊಡ್ಡೋರು! ಎಂದು ಆತನನ್ನು ನೋಡುವ ಮೊದಲೇ ಅವಳ ಮನಸ್ಸಿನಲ್ಲಿ ಗೌರವ ಬೆಳೆದಿತ್ತು. ತಮ್ಮ ಹಣದಲ್ಲಿಯೂ ಪ್ರಭಾವದಲ್ಲಿಯೂ ಪೂರ್ಣ ವಿಶ್ವಾಸವನ್ನಿರಿಸಿದ್ದ ಅವಳ ತಂದೆ ಅದೇ 'ಗಂಡನ್ನೇ ತರ್ತೀನಿ' ಎಂದು ಹೆಣ್ಣನ್ನು ಗಂಡಿಗೆ ಕೊಡುವ ಬದಲು ಗಂಡನ್ನೇ ಹೆಣ್ಣಿಗೆ ತರುವ ಧಾಟಿಯಲ್ಲಿ ಆತ್ಮವಿಶ್ವಾಸದಿಂದ ಮಾತನಾಡಿದಾಗ ರಂಗಲಕ್ಷ್ಮಿಯು ಡಾ॥ ಶಿವಪ್ಪ ತನಗೆ ಸಿಕ್ಕಿಯೇ ಬಿಟ್ಟರೆಂದೂ ತಾನು ಅವರ ಸೇವೆ ಮಾಡಿ ಆ ಮೂಲಕ ಜನ ಸೇವೆಯಲ್ಲಿ ಭಾಗಿಯಾಗಬಹುದೆಂದೂ ಯೋಚಿಸಿದ್ದಳು. ತೋಪಮ್ಮನ ಜಾತ್ರೆಯಲ್ಲಿ ಗಾಯಗೊಂಡವರಿಗೆ ಅವನು ಮಾಡಿದ ಚಿಕಿತ್ಸೆ, ಅವರು ತನ್ನನ್ನು ಕದ್ದು ಮುಚ್ಚಿ ನೋಡಿದುದು, ಇವೆಲ್ಲವೂ ಅವಳ ಒಳ್ಳೆಯ ಮತ್ತು ಮಧುರ ಭಾವನೆಗಳನ್ನು ಉದ್ದೀಪಿಸಿದ್ದವು.

ಬಯಸುವುದೊಂದು ಆಗುವುದೊಂದು ಇನ್ನೊಂದು ಎನ್ನುವಂತೆ, ಡಾ॥ ಶಿವಪ್ಪನನ್ನು ರಂಗಲಕ್ಷ್ಮಿ ಬಾಳೆಕಾಯಿಯಂತೆ ಬಯಸಿ ವರಿಸಬೇಕೆಂದಿದ್ದರೂ, ತಂದೆಯ ಒತ್ತಾಯಕ್ಕೆ ಮನಸ್ಸಿಲ್ಲದ ಮನಸ್ಸಿನಿಂದ ಪುಟ್ಟತಮ್ಮಯ್ಯನಿಗೆ ಮದುವೆಯಾಗಿ ಬೆಂಗಳೂರು ಸೇರಿಕೊಂಡಳು.



ರಂಗಲಕ್ಷ್ಮಿಗೆ ಪುಟ್ಟತಮ್ಮಯ್ಯ ತನ್ನನ್ನು ಮದುವೆಯಾದದ್ದು ತನ್ನ ಅಪ್ಪನಿಂದಾಗಿ ಮಂತ್ರಿಗಳಿಂದ ಸಿಗುವ ಸಹಾಯಕ್ಕಾಗಿ ಎಂಬ ಅನುಮಾನ ಬಂದು ಅವಳು ಗಂಡನ ಮಾತು ಮೀರಿ ಜಮೀನು ಮಾರಿ, ಚಿಂದಕ್ಕಿಗೌಡರಲ್ಲಿ ತಂದೆ ಮಾಡಿಟ್ಟ ಸಾಲ ತೀರಿಸುತ್ತಾಳೆ. ಇದರಿಂದ ಪುಟ್ಟತಮ್ಮಯ್ಯನ ಸಿಟ್ಟು ತಡೆಯದಾಯಿತು. ಆತ ಹೊಡೆಯಲು ಬಂದಾಗ 'ನಮ್ ಅಪ್ಪಾಜಿ ಇರಾಗಂಟ ನಾಯಿಮರಿ ಹಂಗಿದ್ರಿ, ಈಗ ನಮ್ಮನ್ನೇ ನನ್ನ ಹೊಡೆಯಾಕೆ ಧೈರ್ಯ ಬಂತಾ? ನಾನು ನಿಮ್ಮ ಹೆಂಡ್ತೀ ಅಲ್ಲ. ನನ್ನ ಹೊಡೆದ್ರೆ ಚಂದಾಗಿರುಲ್ಲ' ಎಂದು ತಿರುಗಿ ನಿಂತಳು. ಮುಂದೆ ಅವನು ಅವಳನ್ನು ಕರೆದುಕೊಂಡು ಹೋಗಿ ಆಳಬೇಕೆಂದು ಎಷ್ಟೆ ಪ್ರಯತ್ನಿಸಿದರೂ ಅವನ ಕೃತಕ ಪ್ರೀತಿಯನ್ನು ಬಲ್ಲ ಅವಳು ಸೋಡಾ ಚೀಟಿ ಕೊಟ್ಟಂತೆ ವರ್ತಿಸಿದಳು.

ಮದುವೆಯಾದ ನಂತರ ಒಮ್ಮೆಯೂ ಪುಟ್ಟತಮ್ಮಯ್ಯ ಅವಳೊಂದಿಗೆ ಹೃದಯ ತುಂಬಿ ಮಾತಾಡಲಿಲ್ಲ. ಬರೀ ಆಡಂಬರದಿಂದ ಕೂಡಿದ ಗಂಡನ ಮಾತುಗಳಿಂದ ಗಂಡನಿಂದ ನಿಜವಾಗಿ ಸಿಗಬೇಕಾಗಿದ್ದ ಒಲವು, ನಲಿವು ಕಾಣದೆ ಅವಳು ಬೇಜಾರುಗೊಂಡಿದ್ದಳು. ತಾನು ನಿತ್ಯ ಪೂಜಿಸುವ ಕೋದಂಡರಾಮ ಫೋಟೋವನ್ನು ಪುಟ್ಟತಮ್ಮಯ್ಯ ಕಿತ್ತು ಹಾಕಿ ಅದರ ಸ್ಥಳದಲ್ಲಿ ನಾಗರವಳ್ಳಿ ಅಪ್ಪಾಜಿ ಫೋಟೋ ತೂಗು ಹಾಕಲು ಹೋಗಿ ತಾನು ಅದನ್ನು ವಿರೋಧಿಸಲು ನಿಂತಾಗ, ಕೈ ತಾಗಿ ಮಂತ್ರಿಗಳ ಫೋಟೋ ಬಿದ್ದು ಚೂರು ಚೂರಾಯಿತು. ಆಗ ಪುಟ್ಟತಮ್ಮಯ್ಯ ವೀರಭದ್ರನ ಅವತಾರವನ್ನು ತಾಳಿ ಬಾಯಿಗೆ ಬಂದಂತೆ ಬಯ್ದದ್ದು ಅವಳ ಮನಸ್ಸನ್ನು ಕಲ್ಲಾಗಿ ಮಾಡಿತ್ತು.

ಗಂಡ ಏನಾದರೂ ರೇಗಿದಾಗ, 'ನಮ್ಮಪ್ಪಾಜಿಗೆ ಹೇಳ್ತಿನಿ' ಎಂದರೆ ಹೆದರಿ ನಿಂಗೆ ಜಾರ್ಜೆಟ್ ಸೀರೆ ತಂದುಕೊಡ್ತೀನಿ ಸುಮ್ಕಿರು ಎಂದು ಸಮಾಧಾನ ಹೇಳಲು ಬರುವ ಹೇಡಿ ಗಂಡನ ಜೊತೆ ಬದುಕು ಮಾಡುವುದು ಷಂಡತನವೆಂದು ಅವಳಿಗೆ ಅನಿಸಿತ್ತು. ದಿನಾಲು ಏನಾದರೊಂದು ಕಾದಾಟ ನಡೆದು ಅವಳು ಬಹಳಷ್ಟು ಬೇಜಾರುಗೊಂಡಿದ್ದಳು. ಕೊನೆಗೆ ತಂದೆಯ ಸಂಕಟದ ಕಾಲದಲ್ಲಿ ಅವರೇ ಅಳಿಯ ಮಗಳು ಚೆನ್ನಾಗಿರಲೆಂದು ಕಟ್ಟಿಸಿಕೊಟ್ಟಿದ್ದ ಮನೆಯನ್ನು ಮಾರಲು ಹಿಂದೇಟು ಹಾಕಿದ ಕಾರಣದಿಂದ ತನ್ನ ಗಂಡನ ಸ್ವಾರ್ಥದ ಬಗ್ಗೆ ಕ್ರೋಧ ಉಂಟಾಗಿ ಅವನಿಂದ ಬಿಡುಗಡೆ ಹೊಂದುವ ನಿರ್ಧಾರಕ್ಕೆ ಬಂದಳು. ನಿಮಗೆ ಬೇಕಾದ್ರೆ ನಾನು ಕಾಗದದಲ್ಲಿ ಬರಕೊಡ್ತೀನಿ, ನೀವು ಸುಖವಾಗಿ ಯಾವ ಮಿನಿಸ್ಟರ

ಮಗಳನ್ನಾದರೂ ಮದುವೆ ಮಾಡ್ಕಳಿ"[೧] ಎಂದು ಹೇಳಿದಳು. ನಂತರ ತಾನು ನರ್ಸ್ ಟ್ರೈನಿಂಗಿಗೆಂದು ಆಸ್ಪತ್ರೆಯಲ್ಲಿದ್ದಾಗ ನರಸಕ್ಕನಿಂದ ಡಾ॥ ಶಿವಪ್ಪನ ಭೇಟಿಯಾಗುತ್ತದೆ. ಆಗ ಇಬ್ಬರಲ್ಲಿಯೂ ಹಿಂದಿನ ಆಕರ್ಷಣೆ ಮರುಕಳಿಸುತ್ತದೆ. ಶಿವಪ್ಪನ ಧ್ಯೇಯ, ಆದರ್ಶಗಳ ಬಗ್ಗೆ ಮೊದಲಿನಿಂದಲೂ ಆಕೆಗೆ ಅಭಿಮಾನ ಆಕರ್ಷಣೆಗಳಿರುತ್ತವೆ. ಹಾಗಾಗಿ ಈಕೆಯು ಆತನ ಸೇವಾ ಜೀವನದಲ್ಲಿ ಸಹಧರ್ಮಿಣಿಯಾಗಿ ದುಡಿಯಲು ಒಪ್ಪಿಗೆ ನೀಡುತ್ತಾಳೆ. ಈ ಪಾತ್ರದ ಮೂಲಕ ಆಧುನಿಕ, ದಿಟ್ಟ ಮಹಿಳೆಯ ಚಿತ್ರಣವನ್ನು ನಮ್ಮ ಮುಂದಿಡುತ್ತಾರೆ, ಭೈರಪ್ಪನವರು.

**ಕಲ್ಲಮ್ಮ :** ಕಲ್ಲಮ್ಮ ಶಿವಪ್ಪನ ತಾಯಿ ಡಾ॥ ಶಿವಪ್ಪ ಹಳ್ಳಿಗೆ ವೈದ್ಯನಾಗಿ ಬಂದು ಹಳ್ಳಿಗರ ನಡುವೆ ಶುಶ್ರೂಷೆಯಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳುತ್ತಾನೆ. ಔಷಧಿಯ ಹಣವನ್ನು ಮಾತ್ರ ರೋಗಿಗಳಿಂದ ಪಡೆದುಕೊಂಡು ಅದೂ ಸಾಧ್ಯವಿಲ್ಲದ ತೀರ ಬಡವರಿಗೆ ಪುಕ್ಕಟೆಯಾಗಿ ಕೊಡುತ್ತಾನೆ. ಆದರೆ, ಅವನ ತಾಯಿ ಕಲ್ಲಮ್ಮ ಎಲ್ಲಿ ತಾಯಿಯರಂತೆ ಮಗನ ಏಳ್ಗೆಯನ್ನು ಬಯಸುವವಳಾಗಿದ್ದಾಳೆ. ಆಕೆ ಮಗ ಪುಕ್ಕಟೆ ಔಷಧಿ ಕೊಟ್ಟವರಿಂದ ತನ್ನ ಹೊಲವನ್ನು ಉತ್ತಿ ಬತ್ತಿಸಬೇಕೆನ್ನುತ್ತಾಳೆ. ಆದರೆ, ಮಗನ ಆದರ್ಶ ಅಡ್ಡ ಬರುತ್ತದೆ. ಹಣ ಸಂಪಾದಿಸದಿದ್ದರೂ ಸರಿ ಮಗ ಸಂಸಾರಿಯಾಗಿ ಸುಖವಾಗಿರುವದನ್ನಾದರೂ ಕಣ್ತುಂಬ ನೋಡಬೇಕೆಂದರೆ ಕಣ್ಣು ಮುಚ್ಚುತ್ತಾಳೆ. ಇದು ನಮ್ಮ ಭಾರತೀಯ ಎಲ್ಲ ತಾಯಂದಿರ ಚಿತ್ರ. ಮಗ ಬೆಳೆದು ದೊಡ್ಡ ಹುದ್ದೆಯಲ್ಲಿರಬೇಕು. ದೊಡ್ಡವರೊಂದಿಗೆ ಸಂಬಂಧ ಬೆಳೆಸಬೇಕು. ಅಂತೂ ದೊಡ್ಡದಾಗಿಯೇ ಬಾಳಬೇಕೆಂದು ಬಯಸುವ ಎಲ್ಲ ತಾಯಂದಿರಂತೆ ಆಕೆ ಆ ಬಯಕೆಯಂತೆ ಕಲ್ಲಮ್ಮ ತಮಗಿಂತ ಅಂತಸ್ತಿನಲ್ಲಿ ಹೆಚ್ಚಿನವರಾದ ಸಾದರವಳ್ಳಿಯವರ ಸಂಬಂಧ ಬೆಳೆಸಲು ಬಯಸುತ್ತಾಳೆ. ಅದು ಸಾಧ್ಯವಾಗದಾಗ ರಾಮಲಿಂಗೇಗೌಡರಂಥವರೊಂದಿಗೆ ಸಂಬಂದ ಬೆಳೆಸಿ ರಂಗಲಕ್ಷ್ಮಿಯಂತಹ ಸುಂದರಿ, ಗುಣವಂತೆ ತನ್ನ ಸೊಸೆಯಾಗಿ ಬರಲೆಂದು ಬಯಸುತ್ತಾಳೆ. ಅದೂ ಸಾಧ್ಯವಾಗದಾದಾಗ ನಿಟ್ಟುಸಿರು ಬಿಟ್ಟು ಸುಮ್ಮನಾಗುತ್ತಾಳೆ. ಮಗ ಚುನಾವಣೆಯಲ್ಲಿ ಸ್ಪರ್ಧಿಸಿದಾಗ ಎದುರು ಪಕ್ಷದವರು ಹಣಕೊಟ್ಟು ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳಲು ಹೇಳಿದಾಗ ಅವನು ನಿರಾಕರಿಸಿದ್ದು ಅವಳಿಗೆ ಅವ್ಯವಹಾರಿಕೆಯೆನಿಸುತ್ತದೆ. ಹಣದ ಆಶೆಯಿಂದಲ್ಲ ಮಗನಿಗೆ ಅದು ಅವಶ್ಯವಾದುದರಿಂದ ಹಣವನ್ನು ಬಯಸುತ್ತಾಳೆ. ಹೆಸರು ಕಲ್ಲಮ್ಮ ಎಂಬುದನ್ನು ತೆಗೆದು ಆಯಾ ಪ್ರಾದೇಶಿಕ ಭಾಷೆಗೆ ಅನುಸರಿಸಿ ಹೆಸರಿಟ್ಟರೆ ಕಲ್ಲಮ್ಮ ಎಲ್ಲರ ತಾಯಿಯಾಗಿ ಕಾಣಿಸುತ್ತಾಳೆ.

**ಪುಟ್ಟಕ್ಕ :** ಈ ಕಾದಂಬರಿಯ ಮತ್ತೊಂದು ಸ್ತ್ರೀ ಪಾತ್ರ ಪುಟ್ಟಕ್ಕನದು. ಪುಟ್ಟಕ್ಕ ಕಲ್ಲಮ್ಮನ ಮಗಳು ಹಾಗೂ ಡಾ॥ ಶಿವಪ್ಪನ ಅಕ್ಕ ಈಕೆ ಸದಾ ತಮ್ಮನಿಗೆ ಒಳಿತು ಬಯಸುವವಳು. ಈಕೆಯ ಗಂಡ ಸಣ್ಣಯ್ಯ.

---

೧. ಮತದಾನ – ಎಸ್.ಎಲ್. ಭೈರಪ್ಪ – ಪುಟ – ೧೬೫

ಪುಟ್ಟಕ್ಕನಿಗೆ ತನ್ನ ತಮ್ಮನ ರಾಜಕೀಯ ಪ್ರವೇಶ ಇಷ್ಟವಿಲ್ಲ. ಅದಕ್ಕಾಗಿಯೇ ಕೊಪ್ಪಲಿನಿಂದ ಪುಟ್ಟಕ್ಕ ಅವಳ ಗಂಡ ಸಣ್ಣಯ್ಯ ಸ್ವಲ್ಪ ಓದಿದವರಂತೆ ಕಾಣುತ್ತಿದ್ದ ಮತ್ತೊಬ್ಬ ಮಧ್ಯವಯಸ್ಸಿನವರು ಬಂದರು. ಅವನನ್ನು ಒಳಕ್ಕೆ ಕರೆದುಕೊಂಡು ಹೋಗಿ ಪುಟ್ಟಕ್ಕ ನೇರವಾಗಿ ಮಾತನಾಡಿದಳು. 'ಸಿವಾ ನಿಮಗ್ಯಾಕ್ಲಾ ಇದೆಲ್ಲ ಗಲಾಟೆ? ದೊಡ್‌ದೊಡ್ಡೋರು ಕುಣಿತಾರೆ ಅಂತ ನೀನೂ ಹಿಂಗೆ ಹೋಂಡಾದಾ? ಇರಾ ಎಲ್ಡಾರುಕ್ಕೆ ಹ್ವಲಾನೂ ಕಳ್ಕಂಡು ತಿನ್ನಕ್ ಇಟ್ಟಿಲ್ದಂಗೆ ಆಗ್ಬೇಕಾ'? ಎಂದು ಮಾತನಾಡುತ್ತಾ ಅವಳಿಗೆ ಅಳುವೆ ಬಂದು ಬಿಟ್ಟಿತು. 'ನೀನಾರ ಏಳವ್ವ' ಎಂದು ಅವಳು ತಾಯಿಯ ಮೊರೆಹೊಕ್ಕಾಗ ಕಕ್ಕಾಬಿಕ್ಕಿಯಾದ ಕಲ್ಲಮ್ಮ ಮಗಳ ಮುಖವನ್ನು ನೋಡುತ್ತಾ ಕುಳಿತಳು. ಪುಟ್ಟಕ್ಕ ಮಾತು ಮುಂದುವರಿಸಿ 'ಇವನ್ಯಾಕೆ ಇದ್ಕೆಲ್ಲ ನಿಂತವ್ನೆ'? ಎಂದಾಗ ಸಣ್ಣಯನವರು ನೀ ಸುಮ್ನಿರುಲೇ, ನಾವೆಲ್ಲ ಮಾತಾಡ್ತೀವಿ. ನಿಂಗೆನ್ ಗೊತ್ತೈತೆ ಬ್ಯಾಳೆಕಾಳು? ಎಂದು ಹೆಂಡತಿಯನ್ನು ಗದರಿಸಿ ಗಂಡಸೆಂಬ ಅಭಿಮಾನದಿಂದ ತಾವೇ ಮಾತನ್ನು ಕೈಗೆ ತೆಗೆದುಕೊಂಡರೂ ಅದನ್ನು ಮುಂದುವರಿಸಲು ತಿಳಿಯದೆ ಅವರು ಬರೀ ಉಗುಳು ನುಂಗಲು ಪ್ರಾರಂಭಿಸಿದರು.

ಪುಟ್ಟಕ್ಕ 'ಸಿವಾ ನೀನ್ ಏನೇನೋ ಮಾಡ್ತೀಯಾ. ನಮ್‌ಗೆ ನಂಟಸ್ತನದಾಗೆ ಒಂದು ಮಾತು ತತ್ತೀಯಾ' ಎಂದಳು ಶಿವಪ್ಪನಿಗೆ ಈ ಮಾತನ್ನು ಕೇಳಿ ಆಶ್ಚರ್ಯವಾಯಿತು. ಅದೇನೆಂದು ಕೇಳುವ ಮೊದಲೇ ಪುಟ್ಟಕ್ಕ ಕೇಳಿದಳು. 'ಆಗ ಅವರ ಮನೆ ಎಣ್ಣ ಬ್ಯಾಡ ಅಂದೆ. ನನ್ಮಾತು ಕೇಳ್ಳಿಲ್ಲ. ಈಗ ಹಿಂಗೆ ಎಲೆಕ್ಷನ್ ಮಾಡಾಕೆ ಹೊಂಟಿದೀಯಾ. ರಾಮನಿಂಗಪ್ಪನವರು ನಿಂಗೇನ್ ಕೆಟ್ಟುದ ಮಾಡಿಯವ್ರೆ ಏಳು? "ನಂಗಲ್ಲಿ ಒಂದೊಂದು ಮಾತು ಕೇಳಬೇಕಾದ್ರೂ ಜೀವ ಹೋಯ್ತದೆ. ಆ ಬಿಕನಾಸಿ ಸೂಳೆಮಗ. ಆ ನನ್ ಸವತಿಮಗ ಅವ್ನು ಆ ಪುಟ್ಟತಮ್ಮ ನೆನ್ನೆ ರಾತ್ರೀನಾಗ ಬೆಂಗಳೂರ್‌ನಿಂದ ಬಂದು. ತಿನ್ನಾಕ್ ಹಿಟ್ಟಿಲ್ದೋರ್‌ಗೆಲ್ಲಾ ಎಲೆಕ್ಷನ್ನು ನಿಮ್ಮೂರ್ಗೆ ಓಗಿ ನಿಮ್ ತಮ್ಮಂಗೆ ಏಳಿ. ಇಲ್ದೆ ಇದ್ರೆ ಅವ್ನು ಪಾಪರಾಗಿ ಓಯ್ತಾನೆ ಅಂತ ನನ್ ಕೈಲಿ ಅಂದ. ನಾನ್ ಕೇಳಬೈದಾ ಆ ಮಾತಾ"? ಈಗ ನಿಂಗೆ ಒಟ್ಟು ಎಷ್ಟ್ ಕರ್ಚಾಗೈತೆ ಏಳು. ನಿಂಗೆ ಕರ್ಚಾಗಿರೋ ದುಡ್ಡು ನಾವು ಕೊಡ್ತೀವಿ ಅಂತ ರಾಮಲಿಂಗಪ್ನೋರು ನಮ್ಮ ಜತೆ ಬಂದವ್ರಲ್ಲಾ ಗಿರಿಗೌಡ್ರು. ಅವ್ರ ಕೈಲಿ ಐದು ಸಾವ್ರ ಕೊಟ್ಟು ಕಳ್ಸಿಯವ್ರೆ. ಅದು ಸಾಲಾಕಿಲ್ಲ ಅಂತ ನೀನು ಹಟ ಮಾಡಿದ್ರೆ ಮತ್ತೆ ಐದು ಸಾವ್ರ ಕೊಡಾಕೂ ಅವ್ರು ಬಲ್ಲೆ ಅನ್ನಾಕಿಲ್ಲ. ಹೆಂಗೂ ಹತ್ತು ಸಾವ್ರ ಕೈಗೆ ಬತ್ತದೆ. ಗುಂಜ್‌ಕಂಡು ಸುಮ್ನಾಗು. ಈ ಎಲೆಕ್ಷನ್ ಎಲ್ಲ ನಮ್ಮಂತೋರ್ಗೆ ಯಾಕೆ? ಎಂದು ಹೇಳುತ್ತಾಳೆ.

ಇನ್ನು ಈ ಕಾದಂಬರಿಯಲ್ಲಿ ಬರುವ ಚೆಲುವ ಶೆಟ್ಟಿ, ಪುಟ್ಟಕ್ಕ ಮುಂತಾದ ಪಾತ್ರಗಳು ಅಷ್ಟೇನು ಪ್ರಮುಖವಾದವುಗಳಲ್ಲ ಆದರೆ, ಕಾದಂಬರಿಯಲ್ಲಿರುವ ನಿರ್ವಹಣೆಯ ದೃಷ್ಟಿಯಿಂದ

ಮುಖ್ಯವಾದವುಗಳೇ ಆಗಿವೆ. ಈ ಕಾದಂಬರಿಯಲ್ಲಿ ಕಲ್ಪನಾಂಶ ಹಾಗೂ ತಾಂತ್ರಿಕಾಂಶಗಳನ್ನು ಕಡಿಮೆಗೊಳಿಸಿ ವಾಸ್ತವಿಕಾಂಶವನ್ನು ಹೆಚ್ಚು ದುಡಿಸಿಕೊಂಡ ಕಾರಣಕ್ಕಾಗಿಯೇ ಮತದಾನದಲ್ಲಿ ಬರುವ ಪಾತ್ರಗಳು ತೊಗಲು ಗೊಂಬೆಯಾಗದೆ ಶಬ್ಧ ರಕ್ತ ಮಾಂಸಗಳಿಂದ ಕೂಡಿದ ಜೀವಂತ ವ್ಯಕ್ತಿಗಳಾಗಿವೆ. ಈ ಕಾರಣಕ್ಕಾಗಿಯೇ ಈ ಕೃತಿಗೆ ಇವತ್ತಿನ ಸಮಕಾಲೀನ ಕೃತಿಗಳಲ್ಲಿ ಮಹತ್ವದ ಸ್ಥಾನವಿದೆ.

## ಅಧ್ಯಾಯ – ೫

# ಅವಸ್ಥೆ ಮತ್ತು ಮತದಾನ ಕಾದಂಬರಿಗಳ ತೌಲನಿಕ ಅಧ್ಯಯನ

ಈಗಾಗಲೇ 'ಅವಸ್ಥೆ' ಮತ್ತು 'ಮತದಾನ' ಕಾದಂಬರಿಗಳನ್ನು ಅಧ್ಯಯನ ಮಾಡಲಾಗಿದೆ.

ಈಗ ಈ ಎರಡೂ ಕಾದಂಬರಿಗಳ ತೌಲನಕ ಅಧ್ಯಯನವನ್ನು ಕೈಗೊಂಡು ಈ ಎರಡೂ ಸಾದೃಶ್ಯ ವೈದೃಶ್ಯಗಳನ್ನು ಕುರಿತು ಚರ್ಚಿಸಲಾಗುತ್ತದೆ. ಯಾವುದೇ ಒಂದು ಕೃತಿಯ ಶ್ರೇಷ್ಠತೆ, ವಿಶೇಷತೆಗಳನ್ನು ತಿಳಯಬೇಕಾದರೆ ಅದರಷ್ಟೇ ಮಹತ್ವದ ಮತ್ತೊಂದು ಕೃತಿಯೊಡನೆ ತುಲನೆ ಮಾಡಿ ನೋಡಬೇಕಾಗುತ್ತದೆ. ಈ ನಿಟ್ಟಿನಲ್ಲಿ ಈ ಎರಡೂ ಕಾದಂಬರಿಗಳನ್ನು ವಸ್ತು, ಪಾತ್ರ, ಮತ್ತು ಅಭಿವ್ಯಕ್ತಿಯ ದೃಷ್ಟಿಯಿಂದ ಅಧ್ಯಯನ ಮಾಡಲಾಗಿದೆ. ಅದರ ವಿವರವಾದ ವಿಶ್ಲೇಷಣೆಯೇ ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

**ಅ) ವಸ್ತುವಿನ ದೃಷ್ಟಿಯಿಂದ :**

ಯಾವುದೇ ಕೃತಿಯಾಗಲಿ ಅದರಲ್ಲಿ ವಸ್ತು ಪ್ರಮುಖವಾದದ್ದು. ಇದು ಆ ಕೃತಿಯ ಪಾತ್ರಗಳು, ಅಭಿವ್ಯಕ್ತಿ, ಶೈಲಿಯ ಮೇಲೆ ತನ್ನದೇ ಆದ ಪರಿಣಾಮವನ್ನು ಬೀರುತ್ತದೆ.

'ಅವಸ್ಥೆ' ರಾಜಕೀಯ ವಸ್ತುವನ್ನೊಳಗೂಂಡ ಕಾದಂಬರಿ, ನಮ್ಮ ರಾಜಕೀಯ ಸಂಸ್ಕೃತಿಯ ಇತಿಹಾಸಗಳನ್ನು ತಳಮಟ್ಟ ಶೋಧಿಸುವ ಹಂಬಲವುಳ್ಳ ಕೃತಿ, ಕೃಷ್ಣಪ್ಪ ಪ್ರತಿನಿಧಿಸುವ ರಾಜಕೀಯ ಪರಿಸರ ಅತ್ಯಂತ ವೈವಿಧ್ಯಮಯವಾದ ಜೀವನ ಧೋರಣೆಗಳಿಂದ ಶ್ರೀಮಂತಗೊಂಡದ್ದಾಗಿದೆ. ಕಾದಂಬರಿಯ ಕೇಂದ್ರ ಲಕ್ಷ್ಯವನ್ನು ಈ ಪರಿಸರದ ಬೇರೆ ಬೇರೆ ಪದರಗಳನ್ನು ಅವಲೋಕಿಸುವುದರ ಮೂಲಕ ಕೃಷ್ಣಪ್ಪನ ಹಾಗೂ ಕಾದಂಬರಿಯ ಪ್ರಮುಖ ಸೆಳೆತಗಳ ದರ್ಶನವಾಗಲು ಸಾಧ್ಯವಿದೆ.

'ಮತದಾನ' ಕಾದಂಬರಿಯೂ ರಾಜಕೀಯ ವಸ್ತು ಪ್ರಧಾನವಾದುದು. ನಮ್ಮ ದೇಶ ಸ್ವಾತಂತ್ರ್ಯವನ್ನು ಪಡೆದ ಮೇಲೆ ನಮ್ಮನ್ನು ನಾವೇ ಆಳಿಕೊಳ್ಳುವ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಒಪ್ಪಿಕೊಂಡು ಆಚರಣೆಗೆ ತರಲಾಯಿತು. ಈ ವ್ಯವಸ್ಥೆಯ ಇಲ್ಲಿನ ಪ್ರಜೆಗೆ ಸಿಕ್ಕ ಒಂದು ಪ್ರಬಲವಾದ ಆಸ್ತಿಯೆಂದರೆ (ಚುನಾವಣಾ ಪದ್ಧತಿಯಲ್ಲಿ) ಮತದಾನದ ಮೂಲಕ ಆಳುವವರನ್ನು ಆಯ್ಕೆ ಮಾಡುವ ಹಕ್ಕು ದೊರೆತದ್ದು ಧನಿಕನಿಂದ ದರಿದ್ರನತನಕ ಸಮಾನ ಚಲಾವಣೆಯ ಬಲವುಳ್ಳ ಈ ಅಸ್ತ್ರ ಸರಿಯಾದ ರೀತಿಯಲ್ಲಿ ಬಳಕೆಯಾಗಿದ್ದರೆ ಭಾರತದ ಇಂದಿನ ಚಿತ್ರ ತೀರ ಬದಲಾಗಿ ಪ್ರಜೆಗೆ ಗರಿಷ್ಠಮಟ್ಟದ ಸೌಲಭ್ಯ ದೊರೆಯಬವುದಾಗಿತ್ತು.

ಆದರೆ ಹಾಗಾಗಲಿಲ್ಲವೆಂಬುದೇ ನಮ್ಮ ಇಂದಿನ ಎಲ್ಲ ವಿಪರ್ಯಾಸಗಳಿಗೆ, ವಿಫಲತೆಗಳಿಗೆ ಕಾರಣವಾಗಿದೆ. ಮತದಾನ ಎಂಬ ಹೆಸರೇ ಧ್ವನಿಪೂರ್ಣವಾಗಿದೆ."[೧]

'ಅವಸ್ಥೆ' ಕಾದಂಬರಿಯಲ್ಲಿ ಚರ್ಚಿಸಲ್ಪಡುವ ರಾಜಕೀಯ ಹಂದರದಲ್ಲಿ ಮುಖ್ಯವಾಗಿ ಮೂರು ಸ್ತರಗಳನ್ನು ಗುರುತಿಸಬಹುದು. ಒಂದು ಭೈರಾಗಿ, ಮಹೇಶ್ವರಯ್ಯ ಮತ್ತು ಹನುಮನಾಯ್ಕ ಮುಂತಾದವರ ನಿಗೂಢತೆ, ನಿರ್ಲಿಪ್ತತೆ ಮತ್ತು ಅದಮ್ಯ ಜೀವನೋತ್ಸವವನ್ನು ಪ್ರತಿನಿಧಿಸುವ ಪ್ರಪಂಚ, ಎರಡು – ಒಂದು ಸ್ಪಷ್ಟ ಉದ್ದೇಶಕ್ಕಾಗಿ ಜೀವನವನ್ನು ರೂಪಿಸಿಕೊಳ್ಳುವ, ಒಂದು ರೀತಿಯಲ್ಲಿ ಮಿತಿಗೊಳಿಸಿಕೊಳ್ಳುವ ಅಣ್ಣಾಜಿ, ನಾಗರಾಜರ ಕ್ರಾಂತಿಕಾರಿ ರಾಜಕೀಯ, ಈ ಎರಡು ಪ್ರಪಂಚಗಳಲ್ಲೂ ಬೇರುಬಿಟ್ಟ ಗೌರಿ ದೇಶಪಾಂಡೆಯವರ ಲಿಬರಲ್ ಪ್ರಪಂಚ."[೨]

ಭೈರಪ್ಪನವರ 'ಮತದಾನ' ಒಂದರ್ಥದಲ್ಲಿ ಸರಳ ಸ್ವರೂಪದ ಕೃತಿ. ಈ ಕಾದಂಬರಿಯ ನ್ನು ಕುರಿತಂತೆ ಲೇಖಕರು ಎರಡು ಮಾತುಗಳು ಗಮನಾರ್ಹ ವಾಗಿದೆ. ನಾನೇಕೆ ಬರೆಯುತ್ತೇನೆ? ಲೇಖನದಲ್ಲಿ ಭೈರಪ್ಪನವರು, ತಾವು 'ವಂಶ ವೃಕ್ಷ'ವನ್ನು ಬರೆದ ನಂತರ ವಂಶ ವೃಕ್ಷದಿಂದ ಬಿಡಿಸಿಕೊಳ್ಳಬೇಕೆಂಬ ಅನಿಸಿಕೆ ಹುಟ್ಟಿ ಆ ದಿಶೆಯಲ್ಲಿ 'ಮತದಾನ'ವನ್ನು ಬರೆದುದಾಗಿಯೂ "ಸ್ಥಿತ್ಯಂತರ ಕಾಲದ ಯಾವ ಹೊರೆಯೂ ಇಲ್ಲದೆ ಸಮಕಾಲೀನ ಜೀವನದ ಒಂದು ಮುಖವನ್ನು ವಾಸ್ತವತೆಯ ಹದದಲ್ಲಿ ಹಿಡಿದಿಡುವ ಪ್ರಯತ್ನವಿದು" ಎನ್ನುತಾರೆ ಮತ್ತು ಮತದಾನದ ಮುನ್ನುಡಿಯಲ್ಲಿ ಅವರು ಹೇಳುವುದೇನೆಂದರೆ "ಈ ಕಾದಂಬರಿಯ ಕತೆ ಇಡಿಯಾಗಿ ಅಥವಾ ಬಿಡಿಯಾಗಿ ಸಮಕಾಲೀನ ಹಿಂದೂಸ್ತಾನದ ಯಾವ ಭಾಗದಲ್ಲಾದರೂ ನಡೆಯಬಹುದು" ಎನ್ನುತ್ತಾರೆ.

ಪ್ರಜಾಪ್ರಭುತ್ವ ಭಾರತದ ರಾಜಕೀಯದ ಪ್ರಮುಖ ಪ್ರಕ್ರಿಯೆಯಾದ ಚುನಾವಣೆಗಳಲ್ಲಿ ಗ್ರಾಸ್‌ರೂಟ್ ಲೆವಲ್‌ನಲ್ಲಿ ಆರಂಭವಾಗುವ ಭ್ರಷ್ಟತೆ – ಅಧಿಕಾರ ಲಾಲಸೆ, ಅದಕ್ಕೆ ಬಲಿಯಾಗುವ ಆದರ್ಶ ಮತ್ತು ಮಾನವ ಸಂಭಂಧಗಳು ರಾಜಕಾರಣಿ–ಕಾಂಟ್ರಾಕ್ಟರುಗಳ ಮಧ್ಯ ಬೆಳೆಯುವ ಅನೈತಿಕ ಸಂಭಂಧ ಮಾನವ ಸಂಬಂಧಗಳನ್ನು ಹಳಸುವಂತೆ ಆದು ಮಾಡುವ ಬಗ್ಗೆ ಇವೆಲ್ಲದರ ನಡುವೆ ಸಿಕ್ಕು ನಲುಗುವ ಅಮಾಯಕರು ಮತ್ತು ಆದರ್ಶದ ಸೋಲು ಈ ಕಾದಂಬರಿಯಲ್ಲಿ ಭೈರಪ್ಪನವರು ಕಂಡ ಒಂದು ಬಗೆ. ನಮ್ಮ ಸಮಾಜದಲ್ಲಿ ವ್ಯಕ್ತಿ ಮತ್ತು ಕುಟುಂಬ ಜೀವನದ ಮೇಲೆ ನಿಧಾನವಾಗಿ ರಾಜಕೀಯ ನಡೆಸಲಾರಂಭಿಸಿದ ಪ್ರಹಾರದ ಘಟನೆಯನ್ನು ಕಾದಂಬರಿಯು ಚಿತ್ರಿಸುತ್ತದೆ. ರಾಜಕೀಯ ಪ್ರಜ್ಞೆ ಬೆಳೆಯ ಬೇಕಿದ್ದ ಪರಿಸರದಲ್ಲಿ ರಾಜಕೀಕರಣ ಆಗುತ್ತಿರುವ ದುರಂತದ ಸೂಚನೆ ಇಲ್ಲಿ ಸಿಕ್ಕುತ್ತದೆ. ಈ ಕಾದಂಬರಿ ಯಲ್ಲಿ ಬರುವ ರಂಗಲಕ್ಷ್ಮಿಗೆ ತನ್ನ

---

೧. ಭ್ಯರಪ್ಪಾಭಿನಂದನಾ – ಸಂಪಾದಕ – ಕೊಂಡಜ್ಜಿ ಕೆ. ವೆಂಕಟೇಶ್ – ಪುಟ ೩೮
೨. ಯು.ಆರ್. ಅನಂತಮೂರ್ತಿ – ಸಂ. ಮುರಳೀಧರ ಉಪಾಧ್ಯ ಹಿರಿಯಡಕ – ಪುಟ – ೩೨೦

ಮದುವೆಯೂ ಒಂದು ರಾಜಕೀಯ ಎಂಬ ಸಂಗತಿ ಅರಿವಿಗೆ ಬರುವುದು ಈ ದುರಂತದ ದ್ಯೋತಕವೇ ಆಗಿದೆ. ಆಗತಾನೆ ಅಧಿಕಾರವನ್ನು ತೆಕ್ಕೆಗೆ ತೆಗೆದುಕೊಳ್ಳಲಾಂಭಿಸಿದ್ದ ಕಾಂಗ್ರೆಸ್ ಮತ್ತು ತತ್ಪೂರ್ವದಲ್ಲಿ ಅಧಿಕಾರದ ರುಚಿಯನ್ನುಂಡು ಅದನ್ನು ಹೊಸ ವ್ಯವಸ್ಥೆಯಲ್ಲಿ ಉಳಿಸಿಕೊಳ್ಳ ಬಯಸುವ ಊಳಿಗಮಾನ್ಯ ವ್ಯವಸ್ಥೆಯ ಪ್ರತಿನಿಧಿಗಳ ಸಂಘರ್ಷ ಈ ಕಾಧಂಬರಿಯಲ್ಲಿ ರಾಜಕೀಯ ಸ್ವರೂಪವನ್ನು ನಿರ್ಧರಿಸುವ ಅಂಗವಾಗಿದೆ. ಆದಾಗ್ಯೂ ಇದು ಭೈರಪ್ಪನವರು ಕಂಡ ವಾಸ್ತವದ ಒಂದು ಬಗೆ ಎಂದೇ ಹೇಳಬಹುದು.

ಅನಂತಮೂರ್ತಿಯವರ ಸೃಜನಶೀಲ ಶೋಧನೆಗೆ ಒಳಪಡುವ ರಾಜಕೀಯ ತೀರಾ ಭಿನ್ನಾವಾದ್ದದು. ಅದು ಆಧುನಕ ಮನುಷ್ಯನ ಸರ್ವಸ್ವವನ್ನು ವ್ಯಾಪಿಸುವಷ್ಟು ವಿಶಾಲ ಹರವುಳ್ಳದ್ದು ಅವನನ್ನು ರೂಪಿಸುವಷ್ಟು ಶಕ್ತಿಯುತವಾದ್ದದು. ಒಂದು ಕಾಲದಲ್ಲಿ ಧರ್ಮಕ್ಕಿಂತ ಸರ್ವವ್ಯಾಪ್ತಿತ್ವ ಈ ರಾಜಕೀಯಕ್ಕಿದೆ ನಮ್ಮ ಸಂಸ್ಕೃತಿಯ ಅಂತಃಸತ್ವ ರಾಜಕೀಯವಾಗಿಯೂ ವ್ಯಕ್ತವಾಗಬೇಕಾದ ಚಾರಿತ್ರಿಕ ಅನಿವಾರ್ಯವನ್ನು ಸಾಹಿತ್ಯಿಕ ಚೌಕಟ್ಟಿನಲ್ಲಿ ಇಟ್ಟು ನೋಡುವ ಪ್ರಯತ್ನ ಮಾಡಿದವರು ಅನಂತಮೂರ್ತಿ. ಅವರ ಪ್ರಮುಖ ಕಾದಂಬರಿಯಾದ 'ಅವಸ್ಥೆ'ಯಲ್ಲಿ ಈ ಒತ್ತಡಗಳನ್ನು ಸೃಜನಶೀಲವಾಗಿ ಎದುರಿಸುವ ಪ್ರಯತ್ನ ಇದೆ.

"ನಿಜವಾದ ವ್ಯಕ್ತಿ ಸಂಸ್ಥೆಗಳನ್ನು ಅಥವಾ ಘಟನೆಗಳನ್ನು ಅನುಸರಿಸಿ ಬರೆಯುವುದು ವಾಸ್ತವತೆಯಾದರೆ ಮತದಾನ ಕಾದಂಬರಿಯು ಆ ಜಾತಿಗೆ ಸೇರಿದುದಲ್ಲ. ಇಂತಹ ಘಟನೆಗಳು ನಡೆಯುವುದು ಅಸಂಭವವೇನಲ್ಲ ಎಂದಾದರೆ, ಇದು ನಮ್ಮ ಸಮಾಜದ ವಾಸ್ತವಿಕ ಚಿತ್ರಣವೇ ಎಂಬುದಾಗಿ ಈ ಕಾದಂಬರಿಯ ಮುನ್ನುಡಿಯಲ್ಲಿ ಭೈರಪ್ಪನವರು ಹೇಳಿದ್ದಾರೆ. ನೈಜತೆ ಬೇರೆ, ವಾಸ್ತವತೆ ಬೇರೆ, ಸಂಭವನೀಯತೆಯೂ ವಾಸ್ತವಮಾರ್ಗದ ಅಂಶವೇ. ಹಾಗೆ ನೋಡಿದರೆ ಮತದಾನವು ಅಪ್ಪಟವಾಗಿ ವಾಸ್ತವ ಮಾರ್ಗದ ಕಾದಂಬರಿ".[೧]

ಭೈರಪ್ಪನವರ ರಾಜಕೀಯ ವಸ್ತುವಿನ್ಯಾಸದ ಕಾದಂಬರಿಗಳ ವೈಶಿಷ್ಟ್ಯವೆಂದರೆ, ಅದರ ಸಾಮಾಜಿಕ ಚಿಂತನೆಯ ಚೌಕಟ್ಟಿನಲ್ಲಿ ಅಥವಾ ಅದಕ್ಕೆ ಪಾರ್ಶ್ವಭೂಮಿಯಾಗಿ ರಾಜಕೀಯ ಸಂಗತಿಗಳು ಬರುತ್ತವೆ. ಆದ್ದರಿಂದ ನಾವು ಅವುಗಳನ್ನು ರಾಜಕೀಯ ಎಂದು ಪ್ರತ್ಯೇಕಿಸಿ ನೋಡಲಾಗುವುದಿಲ್ಲ ಇದು ಕಾದಂಬರಿಕಾರರ ಚಿಂತನೆಯ ಫಲವೂ ಹೌದು. ಈ ದೃಷ್ಟಿಯಿಂದ ನಾವು 'ಮತದಾನ' ಕಾದಂಬರಿಯಲ್ಲಿ ನೋಡಬಹುದು.

ಸಮಕಾಲೀನ ಬದುಕಿನ ಸಂದರ್ಭದಲ್ಲಿ ಕೃಷ್ಣಪ್ಪ ತನ್ನ ಆದರ್ಶವನ್ನು ಗಳಿಸಿಕೊಳ್ಳುವುದರಿಂದ ಅದು ವಾಸ್ತವದೊಡನೆ ನಿಜವಾದ ಸಂಬಂಧಗಳನ್ನು ಹೊಂದುವುದರಲ್ಲಿ ಅವನಿಗೆ ಸಹಾಯಕಾರಿಯಾಗುತ್ತದೆ.

---

೧. ಎಸ್. ಎಲ್ ಭೈರಪ್ಪ – ಸಂ – ಡಾ॥ ಪ್ರಾಧಾನ ಗುರುದತ್ತ ಪುಟ – ೩೬
ದೇಶಕುಲಕರ್ಣಿ

ಈ ದೃಷ್ಟಿಯಿಂದ ಅವಸ್ಥೆಯಲ್ಲಿ ಆದರ್ಶ, ವಾಸ್ತವಗಳು ಎರಡು ಧ್ರುವಗಳಂತೆ ಒಂದರಿಂದೊಂದು ಪರಾಙ್ಮುಖವಾಗಿ ಕೆಲಸ ಮಾಡದೆ ಒಂದನ್ನೊಂದು ಪ್ರಭಾವಿಸಲು ಪ್ರಯತ್ನಿಸುತ್ತದೆ. ಇದು ಈ ಕಾದಂಬರಿಯ ವೈಶಿಷ್ಯಗಳಲ್ಲೊಂದು ಹಾಗೆಯೇ ಸಮಕಾಲೀನ ಸಾಂಸ್ಕೃತಿಕ ಸಂದರ್ಭದ ಬಹು ಮಹತ್ವದ ಅಂಗವಾದ ಹಿಂಸೆಯನ್ನು ಚಿತ್ರಿಸುವಲ್ಲಿ ಅವಸ್ಥೆ ತನ್ನ ಇನ್ನೊಂದು ವೈಶಿಷ್ಟ್ಯವನ್ನು ಪ್ರಕಟಗೊಳಿಸುತ್ತದೆ.

ಭೈರಪ್ಪನವರ 'ಮತದಾನ' ಕಾದಂಬರಿಯನ್ನು ಸಹಜವಾಗಿ ನೋಡಿದಾಗ ಯಾವುದೋ ಚುನಾವಣೆಯ ಗ್ರಂಥವಿರಬಹುದೆಂಬ ಕಲ್ಪನೆ ಬರುವುದುಂಟು. ವಿಧಾನಸಭೆಯ ಚುನಾವಣೆಯ ಇರುವುದರ ಜೊತೆಗೆ ಬದುಕಿನ ಬಗ್ಗೆ ತನ್ನ ಮತ ನೀಡುವ ಒಬ್ಬ ಪ್ರಮಾಣಿಕ ಗಾಂಧೀಕಾಲದ ನಿಸ್ವಾರ್ಥಿ ಸಮಾಜದ ಸೇವಕ ಡಾಕ್ಟರನ ಜೀವನೋದ್ದೇಶ ಇಲ್ಲಿ ಅಡಕವಾಗಿದೆ ಅವನನ್ನು ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಳ್ಳಬೇಕೆನ್ನುವ ಇವತ್ತಿನ ವಾಸ್ತವಿಕ ರಾಜಕಾರಣಿಗಳ ಮತ್ತು ಅಂಥವರ ರಕ್ತಸಂಬಂಧಕ್ಕಾಗಿ ಒದ್ದಾಡುವ ಚಿತ್ರಣವು ಇಲ್ಲಿದೆ. ಉಳಿದ ಕಾದಂಬರಿಗಳಿಗಿಂತ ಇಲ್ಲಿ ಕಲ್ಪನಾಂಶ ಹಾಗೂ ತಾತ್ವಿಕಾಂಶಗಳನ್ನು ಕಡಿಮೆಗೊಳಿಸಿ ವಾಸ್ತವಿಕಾಂಶಗಳನ್ನು ಹೆಚ್ಚು ದುಡಿಸಿಕ್ಕೊಳ್ಳಲಾಗಿದೆ. ಇದು ಈ ಕಾದಂಬರಿಯ ವೈಶಿಷ್ಟ್ಯಗಳಲ್ಲಿ ಒಂದಾಗಿದೆ.

'ಅವಸ್ಥೆ' ಮತ್ತು 'ಮತದಾನ' ಎರಡೂ ಕೂಡ ರಾಜಕೀಯ ಕಾದಂಬರಿಗಳು ಆದರೆ ಅವುಗಳ ಮಾರ್ಗ ವಿಭಿನ್ನ ರೀತಿಯದ್ದು. ಅನಂತಮೂರ್ತಿಯವರ ಕಥನ ಶೈಲಿ. ಈ ಎಲ್ಲಾ ಸಾಂಸ್ಕೃತಿಕ ಸಂಪನ್ಮೂಲಗಳನ್ನು ಆಚರಣೆ, ಕಲ್ಪನೆ, ಪುರಾಣ, ಪ್ರತಿಮೆಗಳ ಮೂಲಕ ವಿಶಿಷ್ಟತೆಯನ್ನು ಸಾಧಿಸುತ್ತದೆ. ನಾವೇನು ಹೇಳಲು ಬಯಸುತ್ತಿದ್ದೆವೊ ಅದರ ಮೇಲೆ ನಿಯಂತ್ರಣವಿಲ್ಲದ ಇಂದಿನ ಸ್ಥಿತಿಯನ್ನು ಅನಂತಮೂರ್ತಿಯವರಿಂದಾಗಿ ಕಥನಕಲೆ ನಮ್ಮ ಸುತ್ತಲಿನ ರೋಗಗ್ರಸ್ತ ವಾತಾವರಣಕ್ಕೆ ಖಚಿತ ಉತ್ತರವಷ್ಟೆ ಅಲ್ಲ ಈ ರೋಗಗ್ರಸ್ತ ಸ್ಥಿತಿಗೆ ಸ್ಪಷ್ಟನೆ ಮತ್ತು ಪರಿವರ್ತನೆಯ ಮೂಲಕ ನಿಗ್ರಹ ಮತ್ತು ಪಾರಮಾರ್ಥಿಕ ಚಿಂತನೆಯ ಹೊಸ ಸಾಧ್ಯತೆಗಳನ್ನು ಕಂಡುಕೊಳ್ಳುವ ಸೂಕ್ಷ್ಮವಾದ ಪ್ರಯತ್ನ ಕೂಡ.

ಭೈರಪ್ಪ ಅವರು ಕಲಾವಿದರು ಮಾತ್ರವಲ್ಲ ಘನ ವಿದ್ವಾಂಸರು ಹೌದು. ಬಾಳಿನ ರಸನೂಭೂತಿಯ ಭವಭೂತಿಯಾಗದಲ್ಲಿ ಭೈರಪ್ಪನವರು, ಅವರ ತತ್ವ ಮೀಮಾಂಸೆಯ ಸುಪ್ತ ಭಾಷ್ಯದ ಭಾಮಿತಿಯೂ ಆಗಬಲ್ಲರು. ಇಡಿಯಾಗಿ ನೇರವಾಗಿ ನೋಡುವಾಗಲೇ, ಬಿಡಿಯಾಗಿ ಆಳವಾಗಿ ಪರಾಂಬರಿಸುವ ಲವಲವಿಕೆ ಅವರ ಕಥನಕಲೆಗೆ ದಾರ್ಶನಿಕತೆಯ ಆಯಾಮವನ್ನು ಸೇರಿಸುತ್ತದೆ. ಸಾಹಿತ್ಯಿಕ ತತ್ವದ ದೃಷ್ಟಿಯಿಂದ ಇದು ಅವರ ಪ್ರಾಬಲ್ಯವೋ, ತಿಳಿಯದು. ಆದರೆ, ಅವರ ಯಾವ ಕಾದಂಬರಿಯೇ ಆಗಲಿ, ಅಲ್ಲಿ ತತ್ವವೇತ್ತ ಭೈರಪ್ಪ ಮತ್ತು ಕಲಾವಿದ ಭೈರಪ್ಪ ಈ ಇಬ್ಬರ ತಾಕಲಾಟ ಇದ್ದೇ ಇರುತ್ತದೆ. ಆದ್ದರಿಂದ ಯಾವ

ಕಾದಂಬರಿಯ ಕಥಾನಕದಲ್ಲಿಯೂ ತತ್ವದರ್ಶಿಯಾದ, ತಲಸ್ಪರ್ಶಿಯಾದ ವಿಚಿಕಿತ್ಸೆ ಜೀವನದ ಕೀಲು ಪ್ರಮೇಯಗಳ ದಾರ್ಶನಿಕ ವಿಮರ್ಶೆ ಸಾಕಷ್ಟು ಜಾಡಾಗಿ ಹಗೆದು ಬರುತ್ತದೆ.

ಎರಡೂ ಕಾದಂಬರಿಗಳು ರಾಜಕೀಯ ವಸ್ತುವನ್ನು ಒಳಗೊಂಡಿದ್ದರೂ ಕೂಡ ಅವಸ್ಥೆಯ ಕಾರ್ಯಕಾರಣ ಸಂಬಂಧವನ್ನರಿಯಲಾಗದ ವಿವಿಧ ಹಾಗೂ ಪರಸ್ಪರ ವಿರುದ್ಧ ಭಾವನೆಗಳಿಂದ ತುಂಬಿದ ಆಶಾಂತ ಮನಸ್ಸಿನ ಪ್ರಕ್ಷುಬ್ಧ ಸ್ವಪ್ನಲೋಕ, ಮಾರ್ಕ್ಸಿಸ್ಟ್ ಚಿಂತನೆ ಮತ್ತು ಆಸ್ಥಿತ್ವವಾದಿ ಧೋರಣೆಗಳನ್ನು ಒಳಗೊಂಡಿದೆ. ಆದರೆ 'ಮತದಾನ' ಕಾದಂಬರಿ ಪ್ರಜಾಪ್ರಭುತ್ವ ಪದ್ದತಿಯನ್ನು ಇನ್ನೂ ಸರಿಯಾಗಿ ಅರ್ಥಮಾಡಿಕೊಂಡಿರದ ಭಾರತೀಯರ ಜೀವನದ ಮೌಲ್ಯಗಳು ಹೇಗೆ ಅಸ್ತವ್ಯಸ್ತವಾಗುತ್ತದೆ. ಎಂಬುದನ್ನು ಕಲ್ಪನಾಂಶ ಮತ್ತು ತಾತ್ವಿಕಾಂಶಗಳನ್ನು ಕಡಿಮೆಗೊಳಿಸಿ ಹೆಚ್ಚು ವಾಸ್ತವಿಕಾಂಶವನ್ನು ದುಡಿಸಿಕೊಂಡು ರಚಿತವಾಗಿದೆ. ಜೊತೆಗೆ ಭೈರಪ್ಪನವರು ಬದ್ದತೆಯಿಂದ ಬಿಡುಗಡೆ ಹೊಂದಿ, ವಾಸ್ತವತೆಯತ್ತ ಹೊರಳಿ ನಮ್ಮ ಸಮಸ್ತ ರಾಜಕೀಯವನ್ನು ಪ್ರತಿನಿಧಿಸುವ ಮತದಾನವನ್ನು ಬರೆದಿದ್ದಾರೆ.

ರಾಜಕೀಯ ವಸ್ತುವನ್ನಾರಿಕೊಂಡಿದ್ದರೂ ಯಾವುದೇ ರಾಜಕೀಯ ಪಕ್ಷ ಅಥವಾ ಪಂಗಡಗಳ ನೀತಿ ನಿಲುವುಗಳ ಖಂಡನೆ ಮಂಡನೆಗೆ ಆಸ್ಪದ ಕೊಡದೇ ಇರುವುದರಿಂದ ರಾಜಕಾರಣದ ವಸ್ತುವನ್ನು ಆರೋಗ್ಯಪೂರ್ಣ ದೃಷ್ಟಿಯಿಂದ ನಿರ್ವಹಿಸುವ ರೀತಿಯಿಂದ 'ಮತದಾನ' ಮೆಚ್ಚುಗೆಗಳಿಸುತ್ತದೆ.

ಹೀಗೆ 'ಅವಸ್ಥೆ' ಮತ್ತು 'ಮತದಾನ' ಎರಡೂ ಕಾದಂಬರಿಗಳ ವಸ್ತುವಿನಲ್ಲಿ ಸಾಮ್ಯತೆಯು ಕಂಡುಬಂದರೂ ರಚನೆಯ ಮಾರ್ಗಗಳು ಮಾತ್ರ ವಿಭಿನ್ನವಾಗಿವೆ ಎಂದೇಳಬಹುದು. ಇದರಲ್ಲಿ ಯಾವುದು ಶ್ರೇಷ್ಠ ಯಾವುದು ಸಾಧಾರಣ ಎನ್ನುವುದಕ್ಕಿಂತ ಎರಡೂ ಕಾದಂಬರಿಗಳು ಹೇಗೆ ತಮ್ಮ ತಮ್ಮ ವಸ್ತುವನ್ನು ನಿರೂಪಿಸಿವೆ ಎಂಬುದನ್ನು ನೋಡಬೇಕಾಗುತ್ತದೆ. ಆದರೂ ಒಂದು ಮಾತೆಂದರೆ 'ರಾಜಕೀಯ ಎನ್ನುವುದು ನೀತಿಹೀನರ ಕಟ್ಟಕಡೆಯ ದಂಧೆ' ಎನ್ನುವ ಮಾತೊಂದು ಆಂಗ್ಲ ಭಾಷೆಯಲ್ಲಿದೆ. ನಮ್ಮ ದೇಶದ ರಾಜಕಾರಣಕ್ಕೆ ಈ ಮಾತು ಅಕ್ಷರಶಃ ಅನ್ವಯಿಸುತ್ತದೆ. ದೇಶಸೇವೆ ಜನಸೇವೆ ಎಂಬಂತಹ ಆಕರ್ಷಕ ಮಾತುಗಳ ಮರೆಯಲ್ಲಿ ನಮ್ಮ ರಾಜಕೀಯ ಧುರೀಣರು ನಡೆಸುತ್ತಿರುವ ಸ್ವಾರ್ಥತೆ, ಸಮಯ ಸಾದಕತನಗಳ ಫಲವಾಗಿ ಸಾಮಾಜಿಕ ಜೀವನದಲ್ಲಿ ಭ್ರಷ್ಟತೆ ಇವುಗಳನ್ನು ಎರಡೂ ಕಾದಂಬರಿಗಳು ಅಚ್ಚುಕಟ್ಟಾಗಿ ನಿರ್ವಹಿಸಿವೆ ಎಂದೇ ಹೇಳಬಹುದು.

---

**ಆ. ಪಾತ್ರ ಸಂಬಂಧ :**

'ಅವಸ್ಥೆ' ಮತ್ತು 'ಮತದಾನ' ಎರಡೂ ಕಾದಂಬರಿಗಳಲ್ಲೂ ವೈವಿಧ್ಯಮಯ ಪಾತ್ರಗಳು ಕಂಡುಬರುತ್ತವೆ. ಎರಡೂ ಕಾದಂಬರಿಗಳಲ್ಲೂ ರಾಜಕಾರಣಿಗಳ ಪಾತ್ರಗಳೇ ಕಂಡುಬರುತ್ತವೆ.

ಅವಸ್ಥೆಯ ಪ್ರಮುಖ ಪಾತ್ರವಾದ ಕೃಷ್ಣಪ್ಪನ ಪಾತ್ರದಲ್ಲಿ ನಾವು ವಿರೋದಾಭಾಸಾತ್ಮಕ ದ್ವಂದ್ವಾತ್ಮಕ ಮನವಾವಸ್ಥೆಯನ್ನು ಕಾಣುತ್ತೇವೆ. ಕೃಷ್ಣಪ್ಪ ಕೃತಿಯಲ್ಲಿ ಕೇಂದ್ರಪಾತ್ರವಾಗಿದ್ದು ಆ ಪಾತ್ರದ ಸುತ್ತಲು ವಿವಿಧ ಪಾತ್ರಗಳು ಸಂಬಂಧ ಹೊಂದಿವೆ. ವೈಚಾರಿಕ ಕೃಷ್ಣಪ್ಪ ನಿರೀಶ್ವರವಾದಿಯಾದರೂ ಆಗ್ಗಾಗೆ ಆಗಮೋಕ್ತ ರೀತಿಯಲ್ಲಿ ದೈವಾರಾಧನೆ ಮಾಡಿ ರಹಸ್ಯಮಯ 'ಸ್ವಚ್ಛಂದ ಸ್ಥಿತಿ'ಯನ್ನು ಅನುಭವಿಸುತ್ತಾರೆ. ದ್ವಂದ್ವಗಳೇ ಮೊದಲಿನಿಂದಲೂ ಕೃಷ್ಣಪ್ಪನ ವ್ಯಕ್ತಿತ್ವವನ್ನು ರೂಪಿಸುತ್ತವೆ. ಕೃತಿಯಲ್ಲಿ ಕೃಷ್ಣಪ್ಪನಿಗೆ ಸಾವು ಖಚಿತವಾದರೆ ಅವನು ಈ ದ್ವಂದ್ವಗಳಿಂದ ದೂರ ಇರಲು ಸಾಧ್ಯವಾಗಿ ದ್ವಂದ್ವಮಯ ಪ್ರಪಂಚವನ್ನು ಅರ್ಥಮಾಡಿಕೊಳ್ಳಲು ಆಗುವುದೇ ಇಲ್ಲ. ಹುಟ್ಟು ಸಾವು ಎರಡೂ ಖಚಿತವಾಗಿ ಒಂದೇ ಸರಳರೇಖೆಯಲ್ಲಿ ಮುಂದೆಹೋಗುತ್ತಾ ಜೀವನವನ್ನು ಅದರ ರಹಸ್ಯನ್ನು ಸಾಕಾರಗೊಳಿಸುತ್ತದೆ. ಆದರೆ ಅತ್ತ ಬದುಕಿಯೂ ಇಲ್ಲದ ಇತ್ತ ಸಾವೂ ಖಚಿತವಿರದ, ತಾನು ಅಸಾಯಕನಾಗಿ ದುರ್ಬಲನಾಗಿದ್ದರೂ ಅಧಿಕಾರಕ್ಕಾಗುವ ಕಿತ್ತಾಟದಲ್ಲಿ ಕೇಂದ್ರವಾಗಿರುವ ಕೃಷ್ಣಪ್ಪ ಪೋಪ್ ಕವಿಯ ಶಬ್ಧಗಳಲ್ಲಿ 'ವೈಭವೋಪೇತವಾದ ನಗೆಗೀಡಾದ – ಸಮಸ್ಯೆಯಾದ' ಜೀವನದ ಮಾರ್ಮಿಕ ಸಂಕೇತವಾಗುತ್ತದೆ.

ಕೃಷ್ಣಪ್ಪ ಪ್ರತಿನಿಧಿಸುವುದು ಸೋಶಿಲಿಸ್ಟ್ ಮಾರ್ಗ ವ್ಯವಸ್ಥೆಯೊಳಗಿದ್ದೆ ಅದನ್ನು ಬದಲಿಸಲು ಪ್ರಯತ್ನಿಸುವ ಮಾರ್ಗ ಆದರೆ, ಆ ಮಾರ್ಗವೂ ಹೇಗೆ ತೇಪೆಹಚ್ಚುವ ಕೆಲಸವನ್ನೇ ಮಾಡುತ್ತದೆಂಬುದನ್ನು ಕೃಷ್ಣಪ್ಪನ ಪಾತ್ರದ ಅದಃಪತನ ಎತ್ತಿ ತೋರಿಸುತ್ತದೆ. ವ್ಯಕ್ತಿವಾದಿಯಾದ ಕೃಷ್ಣಪ್ಪ ಸಮಸ್ಯಗಳನ್ನು ಅಸ್ತಿತ್ವವಾದಿ ಸಿದ್ಧಾಂತಗಳ ಬೆಳಕಿನಲ್ಲಿಟ್ಟು ನೋಡುತ್ತಾನೆ. ಕಾದಂಬರಿಯ ಅಂತ್ಯದಲ್ಲೂ ನಾವು ಕಾಣುವುದು ತನ್ನದೇ ಆದ ಅಸ್ತಿತ್ವವನ್ನು ಗುರುತಿಸಿಕೊಳ್ಳಲಾಗದ ದ್ವಂದ್ವ ಮನಃಸ್ಥಿತಿಯನ್ನು ಹೊಂದಿರುವ ಕೃಷ್ಣಪ್ಪನನ್ನೇ. ಕೃಷ್ಣಪ್ಪ ಏಕಕಾಲಕ್ಕೆ ಕ್ರಾಂತಿಕಾರನಾಗಿಯೂ, ಕ್ರಾಂತಿಗೆ ವಿರುದ್ದದವನಾಗಿಯೂ ಇರುತ್ತಾನೆ. ಭ್ರಷ್ಟಾಚಾರ ವಿರೋಧಿಯಾಗಿಯೂ, ಭ್ರಷ್ಟನ ಆಪ್ತನಾಗಿಯೂ ಇರುತ್ತಾನೆ. ಆದರೆ ಯಾವುದರಲ್ಲೂ ಪೂರ್ಣವಾಗಿ ಇರುವವನಲ್ಲ 'ಕ್ರಾಂತಿಗಾಗಿ ಬದುಕೊವನು ವ್ಯಾಮೋಹಿಯಾಗಿರಕೂಡದು ದುಡ್ಡಿನ ವ್ಯವಹಾರ ಹಚ್ಚಿಕೊಂಡು ಬೂರ್ಶ್ವಾ ಆಗಬಾರದು' ಎಂದು ಅಣ್ಣಾಜಿಗೆ ಉಪದೇಶ ಮಾಡುವಂತಹ ಕೃಷ್ಣಪ್ಪನೇ ಸ್ವತಃ ಹೆಂಗಸರ ಚಟದಲ್ಲಿ ಬಿದ್ದು ಒದ್ದಾಡುತ್ತಾನೆ. ಈ ಕಾದಂಬರಿಯ ಎಲ್ಲಾ ಪಾತ್ರಗಳಲ್ಲೂ ದ್ವಂದ್ವಾತ್ಮಕ ಮನಸ್ಥಿತಿಯನ್ನು ಪ್ರಮುಖವಾಗಿ ಕಾಣುತ್ತೇವೆ.

'ಮತದಾನದಲ್ಲಿ ಕಂಡುಬರುವ ಪ್ರಮುಖಪಾತ್ರ ಡಾ.ಶಿವಪ್ಪ ಈತನೇ ಕಾದಂಬರಿಯ ನಾಯಕ ಹಾಗೂ ಕೇಂದ್ರ. ಡಾ॥ ಶಿವಪ್ಪನಿಗೂ ಅವಸ್ಥೆಯ ಕೃಷ್ಣಪ್ಪನಿಗೂ ಅನೇಕ ಸಾಮ್ಯತೆಗಳು ಕಂಡುಬರುತ್ತವೆ. ಡಾ॥ ಶಿವಪ್ಪ ಒಬ್ಬ ಸಾಮಾನ್ಯ ವ್ಯಕ್ತಿ. ಒಬ್ಬ ಸಾಮಾನ್ಯ ವ್ಯಕ್ತಿಯನ್ನು ತಮ್ಮ ಕಾದಂಬರಿಗೆ ನಾಯಕನನ್ನಾಗಿ ಆರಿಸಿವುದರಲ್ಲಿಯೇ ಭೈರಪ್ಪನವರ ಕಾದಂಬರಿಯ ಸ್ವರೂಪ ಬದಲಾದುದನ್ನು ಕಾಣುತ್ತೇವೆ. ಈ ಎರಡೂ ಪಾತ್ರಗಳು ಕೂಡ ತಮಗೆ ಇಷ್ಟವಿಲ್ಲದಿದ್ದರೂ ರಾಜಕೀಯ ರಂಗಕ್ಕೆ ಎಳೆಯಲ್ಪಡುತ್ತಾರೆ. ರಾಜಕೀಯ ಅಥವಾ ರಾಜಕೀಯದಯಶಸ್ಸು ಜೀವನದ ಒಂದು ಮೌಲ್ಯ ಹೌದು. ಆದರೆ ನೈತಿಕ ಆಧ್ಯಾತ್ಮಿಕ ಮೌಲ್ಯಗಳು ರಾಜಕೀಯ ವೌೌಲ್ಯಕ್ಕೆ ಆಧೀನವಾದರೆ ಅಥವಾ ಅದಕ್ಕಾಗಿ ಉಪಯೋಗಿಸಲ್ಪಟ್ಟರೆ ಆಗುವ ಅನಾಹುತಗಳಾವುವು, ಆಗುವ ಮೌಲಿಕ ಪರಿವರ್ತನೆಗಳಾವುವು ಎಂಬುದನ್ನು ಈ ಪಾತ್ರಗಳು ತಿಳಿಸುತ್ತವೆ.

ಭೈರಪ್ಪನವರು ಈ ಕಾದಂಬರಿಯ ನಾಯಕನಾದ ಡಾ॥ ಶಿವಪ್ಪನ ಪಾತ್ರವನ್ನು ನಮಗೆ ಏಕಕಾಲಕ್ಕೆ ಆಶ್ಚರ್ಯ ಆನಂದ ಉಂಟಾಗುವಂತೆ ಚಿತ್ರಿಸಿದ್ದಾರೆ. ಇವತ್ತಿನ ಹಳ್ಳಿಗಳಲ್ಲಿ ಇಂಥ ಡಾಕ್ಟರರು ಸಿಗುವರೇಎಂಬ ಸಂದೇಹವು ಬರುವುದು ಈ ಕಾದಂಬರಿಯಲ್ಲಿ ಬಡವರಿಗೆ ಪುಕ್ಕಟೆಯಾಗಿ ಚಿಕಿತ್ಸೆ ಮಾಡುವ, ಉಳ್ಳವರಿಂದ ಔಷಧಿಗೆ ತಗಲುವ ದುಡ್ಡನ್ನಷ್ಟೆ ತೆಗೆದುಕೊಳ್ಳುವ ಆದರ್ಶವಾದ, ಆರಂಭದಲ್ಲಿಯೇ ನಮ್ಮನ್ನು ಸೆರೆಹಿಡಿಯುತ್ತದೆ. ಶಿವಪ್ಪ ಕಾಸು ತೆಗೆದುಕೊಳ್ಳದೆ ರೋಗಿಗಳಿಗೆ ಚಿಕಿತ್ಸೆ ಮಾಡಬೇಕು ಎನ್ನುವ ಆದರ್ಶಹೊತ್ತು ಆ ದಿಶೆಯಲ್ಲಿ ಹೆಣಗುತ್ತಿದ್ದಾತ. ಗಾಂಧಿಯುಗದ ಆದರ್ಶವನ್ನು ಈತನಲ್ಲಿ ಕಾಣಬಹುದು.

'ಅವಸ್ಥೆ'ಯ ಕೃಷ್ಣಪ್ಪನ ಪಾತ್ರ ವ್ಯವಸ್ಥೆಯೊಳಗಿದ್ದುಕೊಂಡೇ ವೈವಸ್ಥೆಯನ್ನು ಬದಾಲಾಹಿಸಬೇಕೆಂಬ ಆದರ್ಶವನ್ನು ಇಟ್ಟುಕೊಂಡಿದ್ದಂತಹ ಪಾತ್ರ ಆದರೆ ಕೃಷ್ಣಪ್ಪ ವೈವಸ್ಥೆಯ ಜೊತೆಗೆ ಒಂದೊಂದೇ ರಾಜಿ ಮಾಡಿಕೊಳ್ಳತ್ತಾ ಬಂದು ಆ ವೈವಸ್ಥೆಯಲ್ಲಿಯೇ ಆತನು ಒಬ್ಬನಾಗಿ ಬಿಡುತ್ತಾನೆ. ತನ್ನ ಆದರ್ಶವನ್ನು ಉಳಿಸಿಕೊಳ್ಳುವುದರಲ್ಲಿ ಸೋಲುತ್ತಾನೆ. ಇದಕ್ಕೆ ಇತರ ಪಾತ್ರಗಳು ಅಥವಾ ಪರಿಸ್ಥಿತಿಗಳು ಕಾರಣವಿರಬಹುದು ಕೃಷ್ಣಪ್ಪ ದ್ವಂದ್ವದಿಂದ ಪಾರಾಗಲು ಸಕ್ರಿಯ ಅಥವಾ ರಾಜಕಾರಣಕ್ಕೆ ರಾಜೀನಾಮೆ ಕೊಟ್ಟು ತನ್ನ ಹಳ್ಳಿಗೆ ಹಿಂದಿರುಗಿ ದಡ ಹತ್ತದವರಿಗೆ ಸಿಟ್ಟು ಬರೋ ಹಾಗೆ ಪ್ರಯತ್ನಿಸಲು ನಿರ್ಧರಿಸುತ್ತಾನೆ. ಇದು ಈ ಪಾತ್ರವು ಸೋಲಲು ಅಥವಾ ಕೃಷ್ಣಪ್ಪ ರಾಜಿನಾಮೆ ನೀಡಿದನೆಂದರೆ ಆ ವ್ಯವಸ್ಥೆಯಲ್ಲಿ ಆತನೂ ಒಬ್ಬನಾದಂತೆ ಹಾಗೂ ಈ ವೈವಸ್ಥೆಯನ್ನು ಒಪ್ಪಿಕೊಂಡಂತೆಯೇ, ಆತ ವ್ಯವಸ್ಥೆಯನ್ನು ಒಪ್ಪಕೊಂಡೆನೆಂದರೆ, ಆತನ ಆದರ್ಶಗಳ ಸೋಲು ಆದಂತೆಯೇ ಆದರೆ ಮತದಾನದ ಶಿವಪ್ಪನ ಪಾತ್ರವು ಇದಕ್ಕಿಂತ ಸ್ವಲ್ಪ ಭಿನ್ನವಾಗಿ ಚಿತ್ರಿತವಾಗಿದೆ. ಈ ಪಾತ್ರವೂ ಕೂಡ ಪರಿಸ್ಥಿತಿಯ ಹಾಗೂ ಇತರ ವ್ಯಕ್ತಿಗಳ ಕಾರಣದಿಂದ ಅಲ್ಲಲ್ಲಿ ಸೋಲುತ್ತದೆ. ಆದರೂ ಕೂಡ ತನ್ನ ಆದರ್ಶವನ್ನು ಉಳಿಸಿಕೊಳ್ಳುತ್ತದೆ. ಕಾದಂಬರಿಯ ಕೊನೆಯವರೆಗೂ

ಹಾಗೂ ಕೊನೆಯಲ್ಲು ತನ್ನ ಆದರ್ಶವನ್ನು ಎತ್ತಿ ಹಿಡಿಯುತ್ತದೆ. ಕೃಷ್ಣಪ್ಪ ಆದರ್ಶವನ್ನು ಜೀವನದಲ್ಲಿ ಒಂದು ಅಂಗವೆಂದು ಭಾವಿಸದ್ದಂತೆ ಕಂಡುಬರುತ್ತದೆ. ಆದರೆ ಮತದಾನದ ನಾಯಕ ಡಾ॥ ಶಿವಪ್ಪನ ಪಾತ್ರ ಆದರ್ಶವನ್ನೆ ಜೀವನವೆಂದು ನಂಬಿದಂತೆ ಕಂಡುಬರುತ್ತದೆ. ತಾನು ವಿವಾಹವಾದರೆ ಅದು ತನ್ನ ಆದರ್ಶ ಪಾಲನೆಗೆ ತೊಂದರೆ ಉಂಟಾಗುತ್ತದೆಂದು ತಿಳಿದು ತನ್ನ ವಿವಾಹವನ್ನು ನಿರಾಕರಿಸುತ್ತಾನೆ. ಶಿವಪ್ಪನು ತನ್ನ ಜೀವನಕ್ಕಿಂತ, ತನ್ನ ಸುಖಕ್ಕಿಂತ ಆದರ್ಶ ಪಾಲನೆಯಲ್ಲಿ ಕೊಂಚ ಮಾರ್ಪಾಡು ಮಾಡಿಕೊಳ್ಳತ್ತಾನೆಯೇ ಹೊರತು ತನ್ನ ಆದರ್ಶವನ್ನು, ತನ್ನ ಸೇವೆಯನ್ನು ಬಿಡುವುದಿಲ್ಲ ಕೃಷ್ಣಪ್ಪ ತನ್ನ ಅನುಕೂಲಕ್ಕೋಸ್ಕರವಾಗಿ ತನ್ನ ಆದರ್ಶವನ್ನು ಮಾರ್ಪಾಡು ಮಾಡಿಕೊಳ್ಳುತ್ತಾನೆ. ಇದಕ್ಕೆ ಪರಿಸ್ಥಿತಿ ಅಥವಾ ವ್ಯಕ್ತಿಗಳು ಕಾರಣವಾಗಿರುತ್ತಾರೆ. ಹಾಗಾಗಿ ಇದನ್ನು "ಹಿಂದುಳಿದ ಜಾತಿಗಳಿಂದ ಮೇಲೆದ್ದು ಬಂದ ಉತ್ಸಾಹಿ, ಪ್ರಾಮಾಣಿಕ ರಾಜಕೀಯ ನಾಯಕನೊಬ್ಬನು ಭ್ರಷ್ಟ ರಾಜಕಾರಣದ ಬಲೆಯಲ್ಲಿ ಸಿಲುಕಿ ಸೋಲುವ ಕಥೆ, ರೈತ ಚಳುವಳಿಯ ರಾಜಕಾರಣದ ಸೋಲಿನ ಕಥೆ" ಎಂದು ಹೇಳಬಹುದು. ಇದು ಎರಡೂ ಕಾದಂಬರಿಗಳ ಪಾತ್ರಗಳಲ್ಲಿ ಕಂಡುಬರುವ ಪ್ರಮುಖ ವ್ಯತ್ಯಾಸವಾಗಿದೆ.

"ಆದರ್ಶವು ಕೆಲವೊಂದು ಸಮಯದಲ್ಲಿ ಪ್ರಲೋಭನೆಗೆ ಸಿಕ್ಕಿದಾರಿ ತಪ್ಪಬಹುದು ಆದರೆ ಆ ಸಮಯವು ಕಳೆದ ಮೇಲೆ ಒಳಿತು ತಾನೇ ಗೆದ್ದು ಕೆಡುಕಿಗೆ ಪ್ರಾಯಶ್ಚಿತ್ತವಾಗುತ್ತದೆ ಯೋಗ್ಯತೆಗೆ ಫಲ ಸಿಕ್ಕುತ್ತದೆ. ಭೈರಪ್ಪನವರು ಇದನ್ನು ಕಾದಂಬರಿಯಲ್ಲಿ 'ಮಾಂಟೇಜ್'ನ ಮಾದರಿಯಲ್ಲಿ ಧ್ವನಿಸಿದ್ದಾರೆ.[1]

'ಅವಸ್ಥೆ'ಯಲ್ಲಿ ಕಂಡುಬರುವ ಇತರೆ ಪಾತ್ರಗಳಾದ ಅಣ್ಣಾಜಿ, ಮಹೇಶ್ವರಯ್ಯ ಈ ಪಾತ್ರಗಳಲ್ಲಿಯೇ ಕೂಡ ನಾವು ಪ್ರಕ್ಷುಬ್ಧ ಲೋಕದ ದ್ವಂದ್ವತ್ಮಕ ಮನಃಸ್ಥಿತಿಯನ್ನೇ ಕಾಣುತ್ತೇವೆ ಹಾಗೆಯೇ ಮತದಾನದ ನಾಗರವಳ್ಳಿ, ಸಾದರವಳ್ಳಿ, ರಾಮಲಿಂಗೇಗೌಡ, ಪಾತ್ರಗಳು ತಮ್ಮ ಸ್ವಂತ ಲಾಭದ ಹಿತದೃಷ್ಟಿ ಇಟ್ಟುಕೊಂಡು ಪ್ರತಿಯೊಂದು ಕೆಲಸಕ್ಕೂ ತಮ್ಮ ಪ್ರತಿಕ್ರಿಯೆ ವ್ಯಕ್ತಪಡಿಸುತ್ತಾ ಆದರಿಂದ ಬೇರೆಯವರಿಗೆ ಆಗುವ ಪ್ರಯೋಜನದ ಬಗ್ಗೆ ನಿಕೃಷ್ಟ ಭಾವನೆ ಹೊಂದುವ ಪಾತ್ರಗಳಾಗಿ ಮೂಡಿ ಬಂದಿವೆ.

ಮಹೇಶ್ವರಯ್ಯ ಕಥೆಯ ಪ್ರಾರಂಭದಲ್ಲಿ ಬರುವವ ಕೃಷ್ಣಪ್ಪನನ್ನು ಸ್ಕೂಲಿಗೆ ಸೇರಿಸಿ ವಿದ್ಯಾಭ್ಯಾಸ ಮಾಡಿಸುತ್ತಾರೆ. ಮುಂದೆ ಕೃಷ್ಣಪ್ಪನಿಗೆ ಯಾವಾಗ ಸಹಾಯದ ಅಗತ್ಯ ಬಿದ್ದಾಗಲೂ ಇದ್ದಕ್ಕಿದ್ದಂತೆ ಬಂದು ನಿಲ್ಲುತ್ತಾರೆ ಒಂದು ದೃಷ್ಟಿಯಲ್ಲಿ ವಿರಕ್ತ ಶ್ರೇಷ್ಠರೆಂದೇ ತೋರುವ ಮಹೇಶ್ವರಯ್ಯ ಕುದುರೆಬಾಲಕ್ಕೆ ದುಡ್ಡುಕಟ್ಟಿ ತಮ್ಮ ಸಂಪತ್ತೆಲ್ಲವನ್ನೂ ಕಳೆದುಕೊಂಡು ಕೃಷ್ಣಪ್ಪನ ಕೈಯಲ್ಲಿ ಸಾಲವನ್ನು ಮಾಡಿ ಆ ಹಣದಿಂದ ಮತ್ತೆ ರೇಸಿನಲ್ಲಿಯೆ ಹಣ ಸಂಪಾದಿಸಿ ಬಂದದ್ದರಲ್ಲಿ ಹತ್ತು ಸಾವಿರವನ್ನು ಸೀತೆಗೆ ಕೊಡುತ್ತಾರೆ.

---

೧. ಎಸ್.ಎಲ್. ಭೈರಪ್ಪ – ದೇಶಕುಲಕರ್ಣಿ – ಸಂ. – ಪ್ರಧಾನ ಗುರುದತ್ತ – ಪುಟ – ೩೭

ಮಾರ್ಕ್ಸಿಸ್ಟ್ ಕ್ರಾಂತಿಕಾರಿ ಅಣ್ಣಾಜಿಯೋ ಎಂ.ಎಲ್.ಎ. ಚೆನ್ನವೀರಯ್ಯನಿಗೆ ಇಂಗ್ಲಿಷ್ ಹೇಳಿಕೊಡುವ, ರೋಟರಿಕ್ಲಬ್‌ನಲ್ಲಿ ಮಾರ್ಕ್ಸವಾದದ ಚಾರಿತ್ರಿಕ ಸಿದ್ಧಾಂತವನ್ನು ವಿವರಿಸುವ, ಚೆನ್ನವೀರಯ್ಯನ ಹೆಂಡತಿ ಉಮೆಯೊಡನೆ ರಹಸ್ಯ ಸಂಬಂಧ ಬೆಳೆಸುವ ವ್ಯಕ್ತಿಯಾಗುತ್ತಾನೆ.

ಅವಸ್ಥೆಯ ಸ್ತ್ರಿಪಾತ್ರಗಳಲ್ಲಿ ಗೌರಿದೇಶಪಾಡೆ ಪಾತ್ರ ಮಾತ್ರ ಕ್ರಿಯಾಶೀಲವಾಗಿದೆ ಉಳಿದ ಸ್ತ್ರಿಪಾತ್ರಗಳಾದ ಕೃಷ್ಣಪ್ಪನ ಹೆಂಡತಿ ಸೀತೆ, ಲೂಸಿನಾ, ಜ್ಯೋತಿ ಪಾತ್ರಗಳು ಪ್ರಮುಖ ಪಾತ್ರಗಳಿಗೆ ಬಿದ್ದಿರುವ ಒತ್ತಿನಿಂದ ಪೇಲವವೆಂದೆನಿಸುತ್ತದೆ. ಗೌರಿದೇಶಪಾಂಡೆಯ ಪಾತ್ರದಲ್ಲಿಯೂ ನಾವು ದ್ವಂದ್ವ ಮನಃಸ್ಥಿತಿಯನ್ನು ಕಾಣುತ್ತೇವೆ ಗೌರಿದೇಶಪಾಂಡೆ ಅಮೇರಿಕಾದಲ್ಲಿ ನೆಲೆಸಿದ ನಂತರ ಬಹಳ ಬದಲಾದಳು ಅವಳೇ ಹೇಳುವಂತೆ ಅಮೇರಿಕಾದಲ್ಲಿ ಒಬ್ಬ ಸೋಷಿಯಾಲಜಿಸ್ಟನ್ನ ಮದುವೆಯಾಗಿದ್ದಳು. ಸಭ್ಯಮನುಷ್ಯ – ಮಾರ್ಕ್ಸವಾದಿ ಕ್ಯಾಂಪಸ್‌ನಲ್ಲಿ ಮಾರ್ಟಿನ್ ಲೂಥರ್ ಕಿಂಗ್ ಪರ ಚಳುವಳೀಲಿ ಭಾಗವಹಿಸುತ್ತಿದ್ದ, ಜೊತೆಗೆ ಗೌರಿಯೂ ಕೂಡ ಈಗ ಗೌರಿಗೆ ರಾಜಕೀಯ ಎಂದರೆ ಬಹಳ ಆಸಕ್ತಿ. ಮುಂದೆ ಗೌರಿದೇಶಪಾಂಡೆ ಕೃಷ್ಣಪ್ಪನ್ನು ನೋಡಿಕೊಳ್ಳಲು ಅವನ ಮನೆಯಲ್ಲಿಯೇ ಉಳಿದಳು ಆಗ ಅವಳು ಅರ್ಧ ದೇಹ ಜಡವಾಗಿರುವ ಕೃಷ್ಣಪ್ಪನೊಡನೆ ಬಾತ್ ಟಬ್‌ನಲ್ಲಿ ಪುರುಷಾಯಿತ ಕ್ರಮದಲ್ಲಿ ಅವನನ್ನು ಕೊಡುತ್ತಾಳೆ. ಕೃಷ್ಣಪ್ಪ "ಎಚ್ಚರವಾದಾಗ ಅದೇನು ಕನಸೋ ಎಂದು ಸೋಜಿಗಪಡುತ್ತ ತಾನು ಟವಲ್ ಮೇಲೆ ಮಲಗಿರುವುದನ್ನು ಗೌರಿ ತನ್ನ ಪಕ್ಕದಲ್ಲೇ ಬೆತ್ತಲೆಯಾಗಿ ಸಿಗರೇಟು ಸೇದುತ್ತಾ ಕೂತಿರುವುದನ್ನು ಗಮನಿಸಿದ" ಇದು ಪ್ರಕ್ಷುಬ್ಧ ಸ್ವಪ್ನ ಲೋಕದ ಅಸಂಗತಿಯಂತೆ ಕಂಡು ಬರುತ್ತದೆ.

ಹೀಗೆ "ಗಂಡಸಿನ ಸಂಗದ ಆಸೆ ಇದ್ದೂ ತನ್ನ ದೇಹ ಮಕ್ಕಳನ್ನು ಪಡೆಯೋ ಸಾಧನವಾಗಲು" ಇಷ್ಟಪಡದ ಕೃಷ್ಣಪ್ಪ ನನ್ನು ಪ್ರೀತಿಸಿದರೂ ತನ್ನ ಸ್ವಾಭಿಮಾನದ ಕೋಟೆಯಿಂದ ಹೊರ ಬರಲಾಗದ ಅಮೇರಿಕಾದಲ್ಲಿ ಮಾರ್ಟಿನ್ ಲೂಥರ್ ಕಿಂಗ್ ಚಳುವಳಿಯಲ್ಲಿ ಭಾಗವಹಿಸಿವ ಇಂಡಿಯಾದಲ್ಲಿ ಡಿಕ್ಟೇಟರ್‌ಶಿಪ್ ಬರದಂತೆ ಪ್ರಯತ್ನಿಸುವ ಗೌರಿದೇಶಪಾಂಡೆ ಇಂತಹ ದ್ವಂದ್ವಾತ್ಮಕ ವ್ಯಕ್ತಿತ್ವಗಳನ್ನು ಪ್ರತಿನಿಧಿಸುತ್ತಾಳೆ.

ಭೈರಪ್ಪನವರು ತಮ್ಮ ಕಾದಂಬರಿಯಲ್ಲಿ ಸ್ತ್ರಿಪಾತ್ರಗಳಿಗೆ ಅಷ್ಟೊಂದು ಮಹತ್ವವನ್ನು ನೀಡಿಲ್ಲ. ಮತದಾನದ ಕಾದಂಬರಿಯಲ್ಲಿ ಕಂಡುಬರುವ ಕೆಲವೇ ಸ್ತ್ರಿ ಪಾತ್ರಗಳಲ್ಲಿ ಪ್ರಮುಖವಾದವೆಂದರೆ ಶಿವಪ್ಪನ ತಾಯಿ ಕಲ್ಲಮ್ಮ ಮತ್ತು ರಾಮಲಿಂಗೇಗೌಡರ ಎರಡನೆ ಮಗಳು ರಂಗಲಕ್ಷ್ಮಿ.

ಮೊದಲಿನ ಗಂಡನಿಂದ ಬಿಡುಗಡೆ ಪಡೆದು ತಾನು ಮನಸಾರೆ ಬಯಸಿದ ಪ್ರೇಮಿಯನ್ನು ಮದುವೆಯಾಗುವ ಸ್ವಾತಂತ್ರ್ಯ ವಹಿಸಿದ ಮೊದಲ ಹೆಣ್ಣುಪಾತ್ರ ರಂಗಲಕ್ಷ್ಮಿಯದು. ಭೈರಪ್ಪನವರ ಹೆಣ್ಣು ಪಾತ್ರಗಳಲ್ಲೊಂದು ವಿಶಿಷ್ಟ ರಚನೆ. ರಂಗಲಕ್ಷ್ಮಿಗೆ ಪುಟ್ಟತಿಯಮ್ಮ ತನ್ನನ್ನು ಮದುವೆಯಾದದ್ದು ತನ್ನ ಅಪ್ಪನಿಂದಾಗಿ ಮಂತ್ರಿಗಳಿಂದ ಸಿಗುವ ಸಹಾಯಕ್ಕಾಗಿ ಎಂಬ ಅನುಮಾನ ಬಂದು ಅವಳು ಗಂಡನ ಮಾತು ಮೀರಿ, ಜಮೀನುಮಾರಿ ಚಿಂದಕ್ಕಿಗೌಡರಲ್ಲಿ ತಂದೆ ಮಾಡಿಟ್ಟ ಸಾಲ ತೀರಿಸುತ್ತಾಳೆ. ಇದರಿಂದ ಸಿಟ್ಟಾಗಿ ಪುಟ್ಟತಮ್ಮಯ್ಯ ಹೊಡೆಯಲು ಬಂದಾಗ 'ನಮ್ ಅಪ್ಪಾಜಿ ಇರಾಗಂಟಾ ನಾಯಿಮರಿಹಂಗಿದ್ರಿ, ನಮ್ಮನ್ನೇ ನನ್ನ ಹೊಡೆಯಾಕೆ ಧೈರ್ಯ ಬಂತಾ? ನಾನು ನಮ್ಮ ಹೆಂಡ್ತೀ ಅಲ್ಲ ನನ್ನ ಹೊಡೆದ್ರೆ ಚಂದವಾಗಿರಲ್ಲ' ಎಂದು ತಿರುಗಿ ನಿಂತಳು.

ಮಂತ್ರಿ ಅಪ್ಪಾಜಿಯವರೊಂದಿಗೆ ಕಂಟ್ರಾಕ್ಟರ ರಾಮಲಿಂಗೇಗೌಡರ ಅವಸಾನವಾಯಿತು. ಅವರು ಆತ್ಮಹತ್ಯೆ ಮಾಡಿಕೊಂಡ ನಂತರ ಮಗಳು ರಂಗಲಕ್ಷ್ಮಿ ಹೇಡಿ ಗಂಡನಿಂದ ದೂರ ನಿಂತು ತಾಯಿಯೊಂದಿಗೆ ಬೆಂಗಳೂರಿನಲ್ಲಿ ನರ್ಸ್ ಕೆಲಸ ಮಾಡುತ್ತಿದ್ದಳು. ಆಪರೇಶನ್ ಕೇಸ್ ಒಂದನ್ನು ಅದೇ ಆಸ್ಪತ್ರೆಯಲ್ಲಿ ಸೇರಿಸಿದ ಶಿವಪ್ಪನಿಗೆ ರಂಗಲಕ್ಷ್ಮಿಯು ಭೇಟಿಯಾಗುತ್ತಾಳೆ. ಆ ಭೇಟಿ ಮುರಿದು ಬಿದ್ದು ಅವನ ಮದುವೆಯ ಆಸೆಯನ್ನು ಮತ್ತೆ ಕುದುರಿಸುತ್ತವೆ. ರಂಗಲಕ್ಷ್ಮಿಯೂ ಒಪ್ಪುತ್ತಾಳೆ. ಪುಟ್ಟತಮ್ಮಯ್ಯನಿಂದ ಬಿಡುಗಡೆ ಪಡೆದ ತಾನು ಮನಸಾರೆ ಬಯಸಿದ ಪ್ರೇಮಿಯನ್ನು ಮದುವೆಯಾಗುವ ಸ್ವಾತಂತ್ರ ವಹಿಸಿದ ಮೊದಲ ಹೆಣ್ಣು ಪಾತ್ರ, ಇವಳು ದೃಡವಾದ ಮನಸ್ಸನ್ನು ಹೊಂದಿದವಳಾಗಿರುತ್ತಾಳೆ. ಗೌರಿದೇಶಪಾಂಡೆ ದ್ವಂದ್ವ ಮನಸ್ಥಿತಿಯನ್ನು ಹೊಂದಿಲ್ಲ, ಆದರೆ ಎರಡು ಪಾತ್ರಗಳು ಕೂಡ ಬಹಳ ಮುಂದುವರಿದ ಪಾತ್ರಗಳಾಗಿವೆ.

'ಮತದಾನ'ದಲ್ಲಿ ಕಲ್ಪನಾಂಶ ಮತ್ತು ತಾತ್ವಿಕಾಂಶಗಳನ್ನು ಕಡಿಮೆಗೊಳಿಸಿ ವಾಸ್ತವಿಕಾಂಶವನ್ನು ಹೆಚ್ಚು ದುಡಿಸಿಕೊಂಡಿರುವುದರಿಂದ ಇಲ್ಲಿನ ಪಾತ್ರಗಳು ತೊಗಲುಗೊಂಬೆಯಾಗಿದೆ ಶಬ್ಧ ರಕ್ತ ಮಾಂಸಗಳಿಂದ ಕೂಡಿದ ಜೀವಂತ ವ್ಯಕ್ತಿಗಳಂತೆ ಕಂಡು ಬರುತ್ತದೆ. ಸಂದರ್ಭ, ಸನ್ನಿವೇಶಕ್ಕೆ ತಕ್ಕಂತೆ ಯಾವುದೇ ಅಡತಡೆಗಳಿಲ್ಲದೆ ಅತಿರೇಖಕ್ಕೆ ಆಸ್ಪದ ಕೊಡದೆ ಬೆಳೆಯುತ್ತಾ ಸಾಗುತ್ತವೆ. ಅವುಗಳದು ಸಹಜ ನಡೆಯಂತೆ ಗೋಚರವಾಗಿ ವಸ್ತುವಿನ ಪ್ರಾಮುಖ್ಯತೆಯನ್ನು ಎತ್ತಿಹಿಡಿಯುತ್ತವೆ. ಆದರೆ, ಅವಸ್ಥೆಯ ಪಾತ್ರಗಳು ದ್ವಂದ್ವಮಯವಾಗಿ ಕಂಡು ಬರುತ್ತವೆ. ಕ್ರಾಂತಿಕಾರಿ ಮಾರ್ಕ್ಸಿಸ್ಟ್ ಆಗಿದ್ದ ಕೃಷ್ಣಪ್ಪನಲ್ಲಿ ಅಸ್ಥಿತ್ವದ ಹುಡುಕಾಟ ಮತ್ತು ದ್ವಂದ್ವಾತ್ಮಕ ಮನಃಸ್ಥಿತಿಯನ್ನು ಕಾಣುತ್ತೇವೆ. ಈ ಕಾದಂಬರಿಯ ಉಳಿದ ಪಾತ್ರಗಳು ಕೂಡ ದ್ವಂದ್ವ ಮನಸ್ಥಿತಿಯನ್ನೇ ಒಳಗೊಂಡವುಗಳಾಗಿವೆ.

**ಅಭಿವ್ಯಕ್ತಿ ಸಂಬಂಧ :**

ಎರಡೂ ಕೃತಿಗಳಲ್ಲಿ ಕಂಡುಬಂದಿರುವ ಅಭಿವ್ಯಕ್ತಿ ವಿಶಿಷ್ಟವಾಗಿವೆ. ವೈಚಾರಿಕತೆ ಎರಡೂ ಕಾದಂಬರಿಗಳಲ್ಲಿ ಕಂಡುಬರುತ್ತದೆ. ಯು.ಆರ್. ಅನಂತಮೂರ್ತಿಯವರ ಭಾಷೆ ಸರಳವಾದದ್ದು, ಕಾರಂತರಂತೆ ಸರಳಪದ, ಸರಳ ವಾಕ್ಯ ಬಳಸಿದರೂ ಭಾಷೆಯಲ್ಲಿ ಏನನ್ನೋ ಹುಡುಕುವಂತಿವೆ. ರೂಪಕ ಮತ್ತು ಪ್ರತಿಕಗಳನ್ನು ಬಳಸಿ ಸಂದರ್ಭದ ಸ್ವಾರಸ್ಯವನ್ನು ಮತ್ತಷ್ಟು ಹೆಚ್ಚಿಸಿದ್ದಾರೆ. 'ಅವಸ್ಥೆ' ಕಾದಂಬರಿಯ ಕೃಷ್ಣಪ್ಪನಿಗೆ ಬಡಿದಿರುವ ಪಾರ್ಶ್ವವಾಯು ಸಹಜ ಹಾಗೂ ಸೂಕ್ತವಾದಂತಹ ರೂಪಕವಾಗಿದೆ ಎಂದೇ ಹೇಳಬಹುದು. ಕೃಷ್ಣಪ್ಪ ತನ್ನ ಜೀವನದ ಸಿಂಹಾವಲೋಕನ ಮಾಡುತ್ತಾ ತನ್ನ ಜೀವನವನ್ನು ನಮ್ಮ ಮುಂದಿಡುತ್ತಾ ಹೋಗುತ್ತಾನೆ.

ಕೃಷ್ಣಪ್ಪನಿಗೆ ಸೊಕ್ಕಿ ಉಳಿದಕ್ಕಿಂತ ಮೇಲೆ ನಿಂತು ಅರಳುತ್ತಿದ್ದ ಗುಲಾಬಿ ಹೂವೊಂದು ಅವನ ಕಣ್ಣು ಸೆಳೆಯಿತು. ಒದ್ದೆಯಾದ್ದರಿಂದ ಹೊಳೆಯುವ ದಳಗಳ ಕಟುವಾದ ಕೆಂಪು; ದೃಷ್ಟಿಯನ್ನು ಒಳಕೆಳೆದುಕೊಳ್ಳುವಂತೆ ಅಂಚಿನಲ್ಲಿ ಮುರಿಯುತ್ತ ತಿರುವಿಕೊಳ್ಳುತ್ತಾ ಸಣ್ಣದಾಗುತ್ತ ಕೇಂದ್ರವನ್ನು ಬಚ್ಚಿಟ್ಟುಕೊಳ್ಳುವ ದಳಗಳ ಮೃದು ಮತ್ತು ಬಿಗಿ; ಆಹ್ವಾನ ಮತ್ತು ರಹಸ್ಯ; ಈ ಬಣ್ಣ ಈ ಬೆಡಗಿಗೂ ಒರಟಾದ ಎಲೆ ಚೂಪು ಮುಳ್ಳುಗಳ ಹುರಿಯಾದ ಕಾಂಡ – ಹೀಗೆ ಏಕಾಗ್ರವಾಗಿ ಗುಲಾಬಿಯನ್ನು ನೋಡುತ್ತ ಜ್ಯೋತಿಯ ಇಂಪಾದ ಹರಟೆಗೆ ಕಿವಿಗಳನ್ನು ಒಡ್ಡಿದ ತಣ್ಣಗೆ ಉರಿಯುವ ಜ್ವಾಲೆಯಂತಿರುವ ಗುಲಾಬಿ. ಏನೋ ಹೇಳುತ್ತ ಏನೋ ಬಚ್ಚಿಡುತ್ತ ಇರುವಂತೆ ಅದು ಇದ್ದುದರಿಂದ ಕೃಷ್ಣಪ್ಪನಿಗೆ ಅದನ್ನು ನೋಡುವುದು ಕಷ್ಟವಾಗತೊಡಗಿತು. ಆಯಾಸ ಪಡದೆ ಅವಳು ತನ್ನನ್ನು ಒತ್ತುತ್ತ ತೀಡುತ್ತ ತನ್ನ ಮಾತಿಗೆ ತಾನೇ ಹಸನ್ಮುಖಿಯಾಗಿರುವಂತೆ ಕಂಡಳು. ಅನಾಯಾಸೇನ ಮರಣಂ ಎಂದು ತಾನು ಆಗೀಗ ಬಯಸಿದ್ದನ್ನು ನೆನೆದ ಇಲ್ಲ – ಈಗ ಜಡವಾಗಿದ್ದ ದೇಹವನ್ನು ಹುರಿದುಂಬಿಸಬೇಕೆನ್ನಿಸುತ್ತದೆ. ಮರ ಹತ್ತಬೇಕು. ಬಾವಿಯಲ್ಲಿಳಿದು ಕೆಸರು ತೋಡಬೇಕು. ಈಜಬೇಕು. ಗದ್ದೆಯಲ್ಲಿ ಸಸಿ ನೆಡಬೇಕು. ಹೂವಿನಂಥ ಪುಟ್ಟ ಕೋಳಿ ಮರಿಗಳನ್ನು ಅಂಗೈ ಮೇಲೆ ಇರಿಸಿಕೊಳ್ಳಬೇಕು – ಹೀಗೆ ಏನೇನೋ ಚಪಲಗಳು ಮೂಡುತ್ತವೆ.

"ಅನಂತಮೂರ್ತಿಯವರ ಕಥನ ಶೈಲಿ ಎಲ್ಲಾ ಸಾಂಸ್ಕೃತಿಕ ಸಂಪನ್ಮೂಲಗಳನ್ನು ಆಚರಣೆ, ಕಲ್ಪನೆ, ಪುರಾಣ, ಪ್ರತಿಮೆಗಳ ಮೂಲಕ ಶೋಧಿಸಿದರೂ ಅವುಗಳ ಪರಿಣಾಮಕ್ಕೆ ಪಕ್ಕಾಗದಂತೆ ಉಳಿಯುವುದರ ಮೂಲಕ ತನ್ನ ವಿಶಿಷ್ಟತೆಯನ್ನು ಸಾಧಿಸುತ್ತದೆ. ನಾವೇನು ಹೇಳಲು ಬಯಸುತ್ತಿದ್ದೇವೊ, ಅದರ ಮೇಲೆ ನಿಯಂತ್ರಣವಿಲ್ಲದ ಇಂದಿನ ಸ್ಥಿತಿಯನ್ನು ಅನಂತಮೂರ್ತಿಯವರಿಂದಾಗಿ ಕಥನಕಲೆ

ನಮ್ಮ ಸುತ್ತಲಿನ ರೋಗಗ್ರಸ್ತ ವಾತಾವರಣಕ್ಕೆ ಖಚಿತ ಉತ್ತರವಷ್ಟೇ ಅಲ್ಲ, ಈ ರೋಗಗ್ರಸ್ತ ಸ್ಥಿತಿಗೆ ಸಪ್ಪನೆ ಮತ್ತು ಪರಿವರ್ತನೆಯ ಮೂಲಕ ನಿಗ್ರಹ ಮತ್ತು ಪಾರಮಾರ್ಥಿಕ ಚಿಂತನೆಯ ಹೊಸ ಸಾಧ್ಯತೆಗಳನ್ನು ಕಂಡುಕೊಳ್ಳುವ ಸೂಕ್ಷ್ಮವಾದ ಪ್ರಯತ್ನ ಕೂಡ."[೧]

ಪಾಶ್ಚಿಮತ್ಯ ಬರಹಗಾರರಾದ ಗಾರ್ಕಿ, ಶೆಲ್ಲಿ, ಲಾಕಿನ್ಸ್ ಮೊದಲಾದವರ ಪ್ರಭಾವ, ಆನಂತರ ಕಾಫ್ಕಾ, ಕಾಮು, ಸಾರ್ಥ ಮುಂತಾದವರ ಬರಹಗಳ ಪ್ರಚೋದನೆ ನೀಡಿದವು. ಹಾಗೆಯೇ ಅನುಭವದ ರಾಶಿ–ರಾಶಿಯನ್ನು ಒಳಗೊಂಡ ಶಿವರಾಮಕಾರಂತರ ಬರಹಗಳು ಇವರಿಗೆ ಸ್ಫೂರ್ತಿ ನೀಡಿದವು. ಇವರೆಲ್ಲರ ಪ್ರಭಾವಗಳಾಗಿರುವುದರ ಸುಳಿವು ಈ ಕಾದಂಬರಿಯಲ್ಲಿ ಕಂಡುಬರುತ್ತದೆ.

ವಾಸ್ತವವಾದ ಅಸ್ತಿತ್ವವಾದ, ಮಾರ್ಕ್ಸ್ ವಾದಗಳಿಂದ ಪ್ರಭಾವಗೊಂಡು ಅವುಗಳನ್ನು ತರಲು ಯತ್ನಿಸಿದ್ದಾರೆ. ಆದರೆ, ಈ ಎಲ್ಲಾ ಅಂಶಗಳು ಕೃತಿಯ ದಿಕ್ಕನ್ನು ಬದಲಾಯಿಸದೇ ನಮ್ಮ ಸಂಸ್ಕೃತಿಗೆ ಮನೋಧರ್ಮಕ್ಕೆ ಮತ್ತು ನಮ್ಮ ಇಷ್ಟಾನಿಷ್ಟಗಳಿಗೆ ಅನುಗುಣವಾಗಿ ಸಹಜವಾಗಿ ಮೂಡಿಬಂದಿದೆ.

'ಅವಸ್ಥೆಯ' ವಸ್ತು ಮೂರು ಭಾಗಗಳಲ್ಲಿ ಸಂಘಟಿತವಾಗಿವೆ. ಮೊದಲನೆಯ ಭಾಗದಲ್ಲಿಯ ಘಟನೆಗಳು ಕತೆಯ ನಾಯಕ ಕೃಷ್ಣಪ್ಪ ಸೋದ್ದಿಶ್ಯವಾಗಿ ಶೋಧಿಸುವ ಜೀವನಕ್ರಮ – ಮೌಲ್ಯಗಳಿಗೆ ಸಂಬಂಧಪಟ್ಟಂತೆ ಬರುತ್ತದೆ. ಎರಡನೆಯ ಭಾಗದಲ್ಲಿ ಸಮಕಾಲೀನ ಸಾಂಸ್ಕೃತಿಯ ಸಂದರ್ಭದ ಬಹು ಮಹತ್ವದ ಅಂಗವಾದ ಹಿಂಸೆಯನ್ನು ಚಿತ್ರಿಸುತ್ತದೆ. ಇದು ಅವಸ್ಥೆಯ ಇನ್ನೊಂದು ವೈಶಿಷ್ಟ್ಯ ಮೂರನೆಯದಾಗಿ ಕಾದಂಬರಿಯ ಕೊನೆಯಲ್ಲಿ ನಡೆಯುವ ಕ್ರಿಯೆ ಇದು ಹೆಚ್ಚಾಗಿ ಕೃಷ್ಣಪ್ಪನ ವರ್ತಮಾನಕ್ಕೆ ಸಂಬಂಧಪಟ್ಟದ್ದಾಗಿದೆ. ಆದರೂ ಒಂದೆರಡು ಮಹತ್ವದ ಹಿನ್ನೋಟಗಳು ಇಲ್ಲಿವೆ. ಮೊದಲನೆಯದು ಕೃಷ್ಣಪ್ಪ ವಾರಂಗಲ್ಲಿನಿಂದ ಹಿಂತಿರುಗಿದ ನಂತರ ಹುಲಿಯೂರಿನಲ್ಲಿ ನೆಲೆಸಿ ರೈತರನ್ನು ಶೋಷಣೆಯ ವಿರುದ್ಧ ಸಂಘಟಿಸಿದುದು. ಇಲ್ಲಿಯ ವಿವರಗಳು ವಾಸ್ತವವಾಗಿದ್ದು ತೀರ ಸಂಯಮದಿಂದ ಅವು ಸಂಯೋಜಿತವಾಗಿವೆ. ಇನ್ನೊಂದು ಕೃಷ್ಣಪ್ಪ ಲೂಸಿನಾಳೊಡನೆ ಪಡೆದ ಅನುಭವ ಅವನ ವೈಯಕ್ತಿಕ ಜೀವನಕ್ಕೆ ಸಂಬಂಧಿಸಿದ್ದು.

ಮಾರ್ಕ್ಸ್‌ವಾದ ಮತ್ತು ಅಸ್ಥಿತ್ವವಾದಗಳಿಂದ ಪ್ರಭಾವಿತರಾಗಿ ಬರೆದುದ್ದರಿಂದ ಈ ಕಾದಂಬರಿಯ ಕೇಂದ್ರ ಪಾತ್ರವಾದ ಕೃಷ್ಣಪ್ಪನಲ್ಲಿ ಈ ನಿಲುವುಗಳನ್ನು ಕಾಣುತ್ತೇವೆ. ಹಾಗೆಯೇ ಇವರ ಮೊದಲಿನ ಕಾದಂಬರಿಗಳಿಗೆ ಸಾಧ್ಯವಾಗದಂಥ ಆದರ್ಶ – ವಾಸ್ತವಗಳು 'ಡಯಲೆಕ್ಟಿವ್'ನ್ನು 'ಅವಸ್ಥೆ' ಸಾಧಿಸುತ್ತದೆ.

ಕಾದಂಬರಿಯ ನಿರೂಪಣೆ, ಪಾತ್ರ ಸನ್ನಿವೇಶಗಳು ಬೇರೆ ಬೇರೆಯಾಗದೆ ಒಟ್ಟಾಗಿ ಒಮ್ಮೆಲೆ ಮುಡಿಯುತ್ತವೆ. ಇದು ಅನಂತಮೂರ್ತಿಯವರ ಬರವಣಿಗೆಯ ವೈಶಿಷ್ಟ್ಯ. ಅನಂತಮೂರ್ತಿಯವರ

---

೧. ಯು.ಆರ್. ಅನಂತಮೂರ್ತಿ : ಮುರುಳಿಧರ ಉಪಾಧ್ಯ ಹಿರಿಯಡಿಕ – ಪುಟ – ೬೭

ಪ್ರತಿಭೆಯಲ್ಲಿ ಎಲ್ಲವನ್ನು ಅನುಮಾನದ ಒತ್ತಡಕ್ಕೆ ಒಳಪಡಿಸಿಕೊಂಡು ನೋಡಬಲ್ಲ ವಿಮರ್ಶಕ ಪ್ರಜ್ಞೆ ಜಾಗೃತವಾಗಿದೆ. ಆದ್ದರಿಂದಲೇ ಅವರ ಕೃತಿಗಳ ವಿಸ್ತಾರ ಕಡಿಮೆಯಾಗಿರುತ್ತದೆ.

ಅನಂತಮೂರ್ತಿಯವರು ಸಮಾಜವಾದೀ ಚಿಂತಕ ಡಾ॥ ರಾಮಮನೋಹರ ಲೋಹಿಯಾ ಅವರ ವಿಚಾರ ಹಾಗೂ ವಿಶ್ಲೇಷಣೆಗಳ ದೃಷ್ಟಿಯಿಂದ ಪ್ರಭಾವಿತರಾದವರು. ಆ ಮೂಲಕವೇ ಮಹಾತ್ಮ ಗಾಂಧೀಜಿಯನ್ನು ಅರಿತುಕೊಳ್ಳಲು ಯತ್ನಿಸಿದರು ತಮ್ಮ ಕಾಲದ ಎಲ್ಲ ರಾಜಕೀಯ, ಸಾಮಾಜಿಕ, ಆರ್ಥಿಕ ಬದಲಾವಣೆಗಳಿಂದ ಪ್ರೇರಿತರಾದವರು ವೈಶಿಷ್ಟ ಸಮಷ್ಟಿಗಳ ಅವಿನಾಸಂಬಂಧವನ್ನು ಮರೆಯದೆ ಸಮಾನತೆಯ ಸಮಾಜವನ್ನು ಹಾರೈಸಿದವರು. ನಮ್ಮ ಪ್ರಜ್ಞೆಯ ಅನಂತಮೂರ್ತಿಯವರ ಅಭಿವ್ಯಕ್ತಿಯಲ್ಲಿ ಮೂಡಿಬಂದ ಈ ಕೃತಿ ಪೂರ್ಣವಾಗಿ ನವ್ಯದ ಧೋರಣೆಗಳನ್ನು ಎತ್ತಿಹಿಡಿದಿದೆ ಎಂಬುದನ್ನು ನಿಸ್ಸಂಶಯವಾಗಿ ಹೇಳಬಹುದಾಗಿದೆ.

ಭೈರಪ್ಪನವರ ಕಾದಂಬರಿಗಳಲ್ಲಿ ಸೋದಿಶ್ಯ ಸಾಹಿತ್ಯ ನಿರ್ಮಾಣದ ಲವಲವಿಕೆಯಲ್ಲಿಯೇ ಹುಟ್ಟಿದವುಗಳಾಗಿವೆ. ಅವುಗಳೊಳಗಿನ ಜೀವನಾನುಭವ ಎಷ್ಟೇ ವಾಸ್ತವವಾಗಿರಲಿ, ವ್ಯಕ್ತಿ ಚಿತ್ರಣ ಎಷ್ಟೇ ಸಜೀವವಾಗಿರಲಿ, ಅವೆಲ್ಲ ಒಂದು ಉದ್ದೇಶದ ಚೌಕಟ್ಟಿನಲ್ಲಿಯೇ ಪುನರ್ ನಿರ್ಮಿತಾದವುಗಳು. ಪ್ರತಿಯೊಂದು ಕಾದಂಬರಿಯ ಉದ್ದೇಶ ನಿಖರವಾದದ್ದು, ಐದಾರು ವಾಕ್ಯಗಳಲ್ಲಿ ಸಂಗ್ರಹಿಸಿ ಹೇಳಬಹುದಾದಷ್ಟು ಖಚಿತವಾದದ್ದು. ಕೆಲವೊಂದು ಸಾರಿ ಪಾತ್ರಗಳ ಸಂಭಾಷಣೆಯಲ್ಲಿ, ಚರ್ಚೆಗಳಲ್ಲಿ ಸವಿವರವಾಗಿ ಈ ಉದ್ದೇಶ ಸ್ಪಷ್ಟವಾಗುತ್ತದೆ. ಇದರಿಂದಾಗಿ ಕಾದಂಬರಿಯ ವೈಚಾರಿಕ ಹಿನ್ನೆಲೆ ಒಂದು ಪ್ರಬಂಧದಲ್ಲಿಯಂತೆ ತಾನಾಗಿ ಹಬ್ಬಿಕೊಳ್ಳುತ್ತದೆ. ಪಾತ್ರಗಳ ನಡವಳಿಕೆಯನ್ನು ಅನುಭವದ ಗುಣಧರ್ಮವನ್ನು ಕೂಡ ಅದು ನಿಯಂತ್ರಿಸುತ್ತದೆ.

ಭೈರಪ್ಪನವರು 'ನವ್ಯ' ಸಾಹಿತಿ ಅಲ್ಲ, ಆದ್ದರಿಂದ ಸಾಮಾನ್ಯವಾಗಿ ನವ್ಯ ಸಾಹಿತಿಗಳ ಕೃತಿಗಳಲ್ಲಿ ಕಂಡುಬರುವಂಥ ಅನೇಕಾನೇಕ ಹೊಸ ತಿರುವುಗಳಾಗಲಿ ಹೊಸ ಆಯಾಮಗಳಾಗಲಿ ಅವರ ಕೃತಿಗಳಲ್ಲಿ ಕಂಡುಬರುವುದಿಲ್ಲ. ಭೈರಪ್ಪನವರ ಕಾದಂಬರಿಗಳಲ್ಲಿ ನಮಗೆ ಕಾಣುವ ಮೊದಲನೆಯ ಮತ್ತು ಮಹತ್ವದ ಲಕ್ಷಣವೆಂದರೆ 'ವೈಚಾರಿಕತೆ' ಈ ಗುಣವು ಕನ್ನಡ ಕಾದಂಬರಿ ಸಾಹಿತ್ಯದಲ್ಲಿ ಭೈರಪ್ಪನವರ ಕೃತಿಗಳಲ್ಲಿ ಕಂಡುಬರುವಷ್ಟು ನಿಚ್ಚಳವಾಗಿ ಗಾಢವಾಗಿ ಮತ್ತು ವ್ಯಾಪಕವಾಗಿ ಬೇರೆ ಯಾವ ಸಾಹಿತಿಯ ಕೃತಿಗಳಲ್ಲಿ ಕಂಡುಬರುವುದಿಲ್ಲವೆಂದು ಹೇಳಬಹುದು. ಕಾದಂಬರಿ ಮಾಧ್ಯಮದಲ್ಲಿ ವೈಚಾರಿಕತೆಯನ್ನು ಕಲೆಗೆ ಅಳವಡಿಸಿಕೊಂಡವರು ಕೆಲವೇ ಕೆಲವರು ಅವರಲ್ಲಿ ಭೈರಪ್ಪ ಮತ್ತು ಅನಂತಮೂರ್ತಿಯವರು ಇದ್ದಾರೆ.

ಭೈರಪ್ಪನವರ ವಿಸ್ತಾರವಾದ ತತ್ವಶಾಸ್ತ್ರಧ್ಯನವೂ, ಸ್ವತಂತ್ರವಾದ ಚಿಂತನ ಶೀಲತೆಯೂ ಅದರ ಕೃತಿಗಳಲ್ಲಿನ ವೈಚಾರಿಕತೆಗೆ ಒಂದು ವಿಶೇಷವಾದ ಮೆರುಗನ್ನು ತಂದುಕೊಟ್ಟಿವೆ. ಮತದಾನ ಕಾದಂಬರಿಯು ಯಾವುದೋ ಚುನಾವಣಾ ಗ್ರಂಥವಿರಬೇಕೆಂಬ ಅರಿವು ಮೂಡಿಸುತ್ತದೆ.

ರಾಜಕಾರಣದ ಪರಮ'ಗುರಿ' ಅಧಿಕಾರ ಗ್ರಹಣ. ಅಧಿಕಾರದ ಚುಕ್ಕಾಣಿ ಹಿಡಿಯಲು ರಾಜಕಾರಣಿ ಹಿಡಿಯದ ಹಾದಿಗಳಲ್ಲ. ಬಳಸದ ವಿಧಿ–ವಿಧಾನಗಳಲ್ಲ. ಸುಳಿ–ಒಳಸುಳಿ, ಹುನ್ನಾರ–ಒಳಹುನ್ನಾರ, ಸುಳ್ಳು–ತಟವಟ, ಮೋಸ–ವಂಚನೆ ಎಲ್ಲ ಇಲ್ಲಿ ಸಾಮಾನ್ಯ! ಸ್ನೇಹ ನಟಿಸುತ್ತಲೆ ಬೆನ್ನಲ್ಲಿ ಚೂರಿ ಹಾಕುವುದು; ಕಂಡವರ ಮಕ್ಕಳನ್ನು 'ತಳ್ಳಿ' ಆಳ ನೋಡುವುದು; ಆದರ್ಶಗಳ ಬಡಾಯಿಕೊಚ್ಚುತ್ತಲೇ ಅವುಗಳ ಅವಸಾನಕ್ಕೆ ಕೈ ಹೆಚ್ಚುವುದು ಎಲ್ಲ ಇಲ್ಲಿ ಬಹಳ ಸಲೀಸು! ಸೂಕ್ಷ್ಮಾವಲೋಕನ ಪ್ರಜ್ಞೆಯುಳ್ಳ ಭೈರಪ್ಪನವರು ರಾಜಕಾರಣದ ಬಹುಮುಖ ಆಟ–ಆವುಟಗಳ ಸಮರ್ಥ ಚಿತ್ರಣವನ್ನು 'ಮತದಾನ'ದಲ್ಲಿ ಕೊಟ್ಟಿರುತ್ತಾರೆ.

ಭೈರಪ್ಪನವರು ಕಾದಂಬರಿಗಳಲ್ಲಿ ತರುವ ಪಾತ್ರ ವೈಚಿತ್ರ್ಯದಿಂದ ಓದುಗರನ್ನು ಸೆಳೆಯುತ್ತಾರೆ. ಭೈರಪ್ಪನವರ ಕಾದಂಬರಿಗಳಲ್ಲಿ ಬರುವ ಪಾತ್ರಗಳು ನಿಖರವೂ, ಸ್ಪಷ್ಟವೂ ನಿರ್ಧಾರಿತವೂ ಆದವು. ಸನ್ನಿವೇಶಗಳಿಂದ ತಾವು ಉದ್ವೇಗಗೊಳ್ಳುವ ಬದಲು ತಾವೇ ಸನ್ನಿವೇಶಗಳನ್ನು ಸೃಷ್ಟಿಸಬಲ್ಲ ಶಕ್ತಿಯನ್ನು ಹೊಂದಿದವು. ಮುಖ್ಯ ಪಾತ್ರಗಳು ಹೇಗೋ ಹಾಗೆ ಉಪ–ಪಾತ್ರಗಳೂ ಸಹ ಬದುಕಿನ ಒಗರನ್ನು, ಕಹಿಯನ್ನು ಒಟ್ಟನಲ್ಲಿ ಹಿಂಸೆಯ ಒಂದು ಸ್ವರೂಪನ್ನು ಅನುಭವಿಸಿ ವ್ಯಕ್ತಗೊಳಿಸುವಂತಹವು. ಇದು ಪಾತ್ರ ವೈಚಿತ್ರ್ಯ. ಇನ್ನೊಂದು ಗುಣ ವಿವರಬಾಹುಳ್ಯದ್ದು ವಸ್ತು ಯಾವುದೇ ಆಗಲಿ, ಅದರ ಗಾತ್ರ ದೊಡ್ಡ ಪ್ರಮಾಣದ್ದು. ಸನ್ನಿವೇಶ ಮತ್ತು ಸಂಗತಿಗಳ ಚಿತ್ರಣ ವಿಸ್ತಾರವಾದ ವಿವರಗಳಿಂದ ತುಂಬಿ ತುಳುಕುತ್ತಿರುತ್ತದೆ.

ಡಾ॥ ಶಿವಪ್ಪನ ಪಾತ್ರವು ಕಾದಂಬರಿಯಲ್ಲಿ ಧೃಡತೆಯಿಂದ ಕೂಡಿದ್ದಾಗಿದೆ. ಎಷ್ಟೆ ಕಷ್ಟ ಬಂದರೂ ತನ್ನ ಆದರ್ಶಗಳನ್ನು ಆತ ಬಿಟ್ಟುಕೊಡುವುದಿಲ್ಲ. ಆದರೆ, 'ಅವಸ್ಥೆ'ಯ ಕೃಷ್ಣಪ್ಪ ತನ್ನ ಆದರ್ಶಗಳನ್ನು ಬಿಟ್ಟು ವ್ಯವಸ್ಥೆಯಲ್ಲಿಯೇ ಒಬ್ಬನಾಗಿ ಹೋಗುತ್ತಾನೆ.

ಕಲೆ ಮತ್ತು ಸಮಸ್ಯೆಯ ಅರಿವು ಎರಡೂ ಭೈರಪ್ಪನವರಲ್ಲಿ ಹದವಾಗಿ ಮೇಳೈಸಿಟ್ಟು ಅವರನ್ನು ಉಳಿದ ಕಾದಂಬರಿಕಾರರಿಂದ ಬೇರೆಯಾಗಿ ನಿಲ್ಲಿಸುತ್ತವೆ. ಭೈರಪ್ಪನವರು ಕಾದಂಬರಿಗಳಲ್ಲಿ ಸಮಸ್ಯೆಯನ್ನೆತ್ತಿಕೊಂಡು ಮಸೆಯುತ್ತಾ ಹೋಗುತ್ತಾರೆ. ಇವರ ಕಾದಂಬರಿಗಳಲ್ಲಿ ಅ.ನ.ಕೃ. ಸಂಭಾಷಣೆಯ 'ಸರಳತೆ' ಇಲ್ಲ ಕಾರಂತರ ವೈವಿಧ್ಯಮಯ 'ಅನುಭವ ವ್ಯಾಪ್ತಿಯೂ' ಇಲ್ಲ ಆದರೆ, ಎತ್ತಿಕೊಂಡ ಸಮಸ್ಯೆಯನ್ನು

ಎಳೆ ಎಳೆಯಾಗಿ ಬಿಡಿಸಿ ಎಂಥ ಸಮಸ್ಯೆಯನ್ನು ಹೃದ್ಯವಾಗಿಸುವಲ್ಲಿ ಭೈರಪ್ಪನವರ ಶಕ್ತಿ ಇದೆ. ಇವರು ಸಮಸ್ಯೆಯನ್ನು ಎತ್ತಿಕೊಳ್ಳುತ್ತಾರೆ ಎಂದರೆ ಅದು ಕೇವಲ ನರೂಪಣಾ ಮಟ್ಟದಲ್ಲಿಯೇ ನಿಲ್ಲುವಿದಿಲ್ಲ. ಆ ಸಮಸ್ಯೆ ಪಾತ್ರ–ಘಟನೆಗಳ ಮೂಲಕ ಘರ್ಷಣೆಯನ್ನು ತಾಳುತ್ತದೆ. ಈ ಘರ್ಷಣೆ ಓದುಗನಲ್ಲಿ ವೈಚಾರಿಕತೆಯನ್ನು ಬೆಳೆಸುತ್ತದೆ. ಬೆಳೆಯುತ್ತಲೆ ಅಂತಿಮ ತೀರ್ಮಾನದ ನೆಲೆಯನ್ನು ಹುಡುಕುತ್ತದೆ. ಸಮಸ್ಯೆಯ ನಿರ್ವಹಣಾ ಶಕ್ತಿ ಭೈರಪ್ಪನವರಲ್ಲಿ ಅಗಾಧವಾಗಿ ಕೆಲಸ ಮಾಡುತ್ತದೆ. ಅದೇ ಅದರ ಬಹತೇಕಃ ಕಾದಂಬರಿಗಳ ಶಕ್ತಿ.

'ಮತದಾನದ' ಭಾಷೆ ಪ್ರಾದೇಶಿಕವಾಗಿದ್ದರೂ ಅದು ಒಂದು ಇಡೀ ದೇಶವನ್ನು ಪ್ರತಿನಿಧಿಸುವ ಕಾದಂಬರಿ. ಅದರಲ್ಲಿ ಇಡೀ ದೇಶದಲ್ಲಿ ನಡೆಯುವ ಸಮಕಾಲೀನ ರಾಜಕೀಯವನ್ನು ಕುರಿತ ಒಂದು ಸಮಗ್ರ ಚಿತ್ರ ದೊರೆಯುತ್ತದೆ. ಚುನಾವಣೆ ಅಭ್ಯರ್ಥಿಗಳ ಆಯ್ಕೆ, ಪ್ರಚಾರ, ಪ್ರಚಾರಕ್ಕೆ ಬೇಕಾದ ಹಣ ಒದಗಿಸುವ ರೀತಿ, ಪಕ್ಷಗಳ ತಿಕ್ಕಾಟ, ಅಭ್ಯರ್ಥಿಗಳು ಎಲ್ಲಿಯೋ ಇದ್ದರೂ ಸಾಮಾನ್ಯ ಜನ ಪಕ್ಷದ ಹೆಸರಿನಲ್ಲಿ ಬಣ ಕಟ್ಟಿ ಹೊಡೆದಾಡುವುದು, ಕಲ್ಲು ತೂರುವುದು, ತಲೆ ಒಡೆದುಕೊಳ್ಳುವುದು, ಅಭ್ಯರ್ಥಿಗಳ ಆಯ್ಕೆಯಲ್ಲಿ ಮತಗಳನ್ನು ಒಡೆದುಕೊಳ್ಳುವಲ್ಲಿ ಹೂಡುವ ರಾಜಕೀಯ ತಂತ್ರ, ಕುತಂತ್ರ ಇವೆಲ್ಲವೂ ಮತದಾನ ಕಾದಂಬರಿಯಲ್ಲಿ ನಡೆಯುವ ಘಟನೆಗಳಾಗಿರುವುದರಿಂದ ಇದೊಂದು ರಾಜಕೀಯ ಕಾದಂಬರಿ ಎಂದು ಕರೆಯಿಸಿಕೊಳ್ಳುತ್ತವೆಯೇ ಹೊರತು ಪ್ರಾದೇಶಿಕ ಕಾದಂಬರಿ ಅಲ್ಲ."[೧]

ಭೈರಪ್ಪನವರ ಕಾದಂಬರಿಗಳಲ್ಲಿ 'ಮತದಾನ' ಆಡುಭಾಷೆಗೆ ಒಳ್ಳೆಯ ಉದಾಹರಣೆ :

"ನಿಮ್ಮನೇಲಿ ಕರಾವು ಆಗಾಕಿಲ್ವಾ?"

"ಆಗ್ತೈತ"

"ಹಾಲು, ಮೊಸರು ಏನು ಮಾಡ್ತೀರಾ?"

"ಆಲು ಇಸ್ಕೂಲು ಮೇಸ್ಟ್ರಿಗೆ ಮಾರ್ತಿವಿ. ಬೆಣ್ಣೆ ಶುಕ್ರವಾರ ಸಂತೇಲಿ ಮಾರ್ತೀವಿ"

"ನಿಮ್ಮನೇಲಿ ಆಗೋ ಹಾಲು ಬೆಣ್ಣೀನ ನೀವು ಮೊದಲು ತಿನ್ನಿ, ಮಕ್ಕಳಿಗೆ ಚೆನ್ನಾಗಿ ಹಾಕಿ ಉಳಿದರೆ ಮಾರೋರಿ ಚೆನ್ನಾಗಿ ಕರಾವು ತಿಂದ್ರೆ ರಕ್ತ ಕೆಡಾಕಿಲ್ಲ. ಕಜ್ಜಿ ಕುರ ಏಳಕಿಲ್ಲ".

---

೧. ಭೈರಪ್ಪನವರಲ್ಲಿ ಕಾದಂಬರಿಗಳ ಸ್ವರೂಪ : ಪುಟ – ೧೯
ಡಾ॥ ಲೀಲಾವತಿ ತೋರಣಗಟ್ಟಿ

ಕಾದಂಬರಿಯುದ್ದಕ್ಕೂ ಗ್ರಾಮ್ಯ ಭಾಷೆಯ ಸೊಗಡನ್ನು ಕಾಣಬಹುದು. ಇದು ಡಾ॥ ಶಿವಪ್ಪ ಮತ್ತು ಪುಟ್ಟತಮ್ಮಯ್ಯನವರ ಭಾಷೆ ಸಹ ಎಂ.ಎ. ಓದಿದ ಪುಟ್ಟತಮ್ಮಯ್ಯ, ಎಂ.ಬಿ.ಬಿ.ಎಸ್. ಓದಿದ ಡಾ॥ ಶಿವಪ್ಪ ಸಹ ಗ್ರಾಮ್ಯ ಭಾಷೆಯನ್ನಾಡುತ್ತಾರೆ.

'ಊಂ ನೆವ್ರೂರ ತಾವಾ ಹೋಗಿದ್ದೆ'

"ಅಪ್ಪಾಜಿ ನೀವ್ ನನ್ನ ಕಾಪಾಡಬೇಕು" ಎಂದು ಬಾಗಿ ಅವರ ಪಾದಗಳನ್ನು ಓಡಿದೆ, ಯೆಲಾ ಇದ್ಯಾಕೋ ಹಿಂಗ್ ಮಾಡ್ತಿಯಾ? ಏನ್ ಏಳ್ !

'ನಂಗೆ ಗ್ಯಾಪಕ ಬರಾಕಿಲ್ಲ. ಗ್ಯಾಪ್ಸು ಅಂತ ಯಂಗಟನಾರಾಣಪ್ಪರಿಗೆ ಏಳು ಇದು ಮಂತ್ರಿ ಮತ್ತು ಪುಟ್ಟತಮ್ಮಯ್ಯನವರ ಸಂಭಾಷಣೆ ಶಿವಪ್ಪ ಮತ್ತು ಮಂತ್ರಿ ಕೂಡ ಗ್ರಾಮ್ಯ ಭಾಷೆಯನ್ನಾಡುವುದು ಗಮನಾರ್ಹವಾದುದು. ಅದೇ ಶಿವಪ್ಪ ಗ್ರಾಮ್ಯ ಭಾಷೆಯಾಡುವುದರ ಜೊತೆಗೆ ಶಿಷ್ಟ ಭಾಷೆಯನ್ನಾಡುವುದು ಗಮನಿಸಬಹುದು.

ರಂಗಲಕ್ಷ್ಮಿ: 'ನಿಮ್ಮ ಶುಶ್ರೂಷಾಲಯಕ್ಕೆ ಒಂದು ಬಿಲ್ಡಿಂಗ್ ಕಟ್ಟಸಬೇಕು ಅಂತೀದಿರಂತೆ' ಎಂದಳು.

'ಹೂಂ, ನಮಗೆ ಯಾರು ಹೇಳಿದರು?'

'ನರಸಕ್ಕ, ಈಗ ನಾನೂ ಅವರೂ ತುಂಬ ಸ್ನೇಹಿತರು ಈಗ ನೀವು ಅನುಕೂಲಸ್ಥರ ಹತ್ರ ದುಡ್ಡು ತಗಂಡು ಅದರಲ್ಲೇ ಬಡವರಿಗೆ ಬಿಟ್ಟೀ ಔಷಧ ಕೊಡ್ತಿರಂತೆ ಅದು ಬಾಳಾ ಒಳ್ಳೇದು. ಹೊಟ್ಟೇರೋರ್ಗೆಲ್ಲಾ ಪುಗಸಟ್ಟೆ ಊಟಕ್ಕೆ ಯಾಕೆ ಇಕ್ಕಬೇಕು? ಶಿವಪ್ಪ ಮತ್ತು ರಂಗಲಕ್ಷ್ಮಿಯರ ಭಾಷೆ ಸಂಭಾಷಣೆ ಶಿಷ್ಟ ಭಾಷೆಯಲ್ಲಿ ನಡೆದಿರುತ್ತದೆ. ಆದರೆ ಕೊನೆಗೆ ಗ್ರಾಮ್ಯ ಭಾಷೆಯ ಬಳಕೆಯಾಗುತ್ತದೆ.

ಅವಸ್ಥೆಯ ನಾಯಕ ಪಾತ್ರವಾದ ಕೃಷ್ಣಪ್ಪನು ಕೊನೆಯಲ್ಲಿ ಸಕ್ರಿಯ ರಾಜಕಾರಣಕ್ಕೆ ರಾಜೀನಾಮೆಯನ್ನು ನೀಡಿ ತನ್ನ ಸೋಲನ್ನು ಒಪ್ಪಿಕೊಳ್ಳುತ್ತಾನೆ. ಆದರೆ, ಮತದಾನದ ನಾಯಕ ಡಾ॥ ಶಿವಪ್ಪ ಏನೇ ಏಳು ಬೀಳುಗಳನ್ನು ಕಂಡರೂ ಕೂಡ ತನ್ನ ಆದರ್ಶವನ್ನು ಬಿಡದೆ ಮುಂದುವರೆಸುವುದನ್ನು ಕಾಣುತ್ತೇವೆ. ಅನಂತಮೂರ್ತಿಯವರ ಕಾದಂಬರಿಯಲ್ಲಿ ನವ್ಯ ಪಂದದ ಧೋರಣೆಗಳನ್ನು ಕಾಣುತ್ತೇವೆ. ಆದರೆ, ಭೈರಪ್ಪನವರು ಇವೆಲ್ಲದರಿಂದ ಮುಕ್ತವಾಗಿದ್ದಾರೆ.

ಹೀಗೆ ಇವೆರಡೂ ಕಾದಂಬರಿಗಳ ವಸ್ತು, ಪಾತ್ರ, ಅಭಿವ್ಯಕ್ತಿಯಲ್ಲಿ ಕೆಲವು ಸಾಮ್ಯ ಮತ್ತು ವೈಷಮ್ಯಗಳನ್ನು ಹೊಂದಿದ್ದು, ಎರಡೂ ಕಾದಂಬರಿಗಳು ಕೂಡ ಹೆಚ್ಚಾಗಿ ವಾಸ್ತವಿಕಾಂಶಗಳನ್ನು ಒಳಗೊಂಡಿದ್ದು ಕಲ್ಪನಾಂಶಗಳು ಬಹಳ ಕಡಿಮೆ ಇರುವುದರಿಂದ ಈ ಕಾದಂಬರಿಗಳು ವಾಸ್ತವಿಕ ಜೀವನಕ್ಕೆ ಬಹಳ ಹತ್ತಿರವಾಗಿದೆ. ಈ ಎರಡೂ ಕಾದಂಬರಿಗಳು ಕನ್ನಡ ಸಾಹಿತ್ಯ ಕ್ಷೇತ್ರದ ಅತ್ಯುತ್ತಮ ಮೈಲಿಗಲ್ಲುಗಳಾಗಿವೆ.

## ಅಧ್ಯಾಯ - ೬

# ಕಾದಂಬರಿಕಾರರ ದೃಷ್ಟಿ ಧೋರಣೆ

ಪ್ರತಿಯೊಬ್ಬ ಲೇಖಕನ ದೃಷ್ಟಿಕೋನವೂ ಭಿನ್ನ-ಭಿನ್ನವಾಗಿರುತ್ತವೆ. ಇದಕ್ಕೆ ಆತನ ಪರಿಸರ, ಮನೋಧರ್ಮವೆ ಕಾರಣವಾಗಿರುತ್ತದೆ. ವಸ್ತುವು ಒಂದೇ ಆದರೂ ಕೂಡ ಅವರು ನೋಡುವ ದೃಷ್ಟಿಕೋನಗಳು ಬದಲಾಗಿರುತ್ತವೆ. ಕೆಲವೊಮ್ಮೆ ಲೇಖಕನ ಧೋರಣೆಗಳು ಅಂದರೆ ಮಾರ್ಕ್ಸ್‌ವಾದಿ, ಅಸ್ಥಿತ್ವವಾದಿ ಮುಂತಾದ ವಿಚಾರಧಾರೆಗಳು ಕೂಡ ಪ್ರಭಾವ ಬೀರುತ್ತವೆ. ಇದರಿಂದಲೂ ಲೇಖಕರ ದೃಷ್ಟಿಕೋನಗಳು ಬದಲಾಗುತ್ತದೆ.

'ಅವಸ್ಥೆ'ಯಲ್ಲಿ ಲೇಖಕರ ದೃಷ್ಟಿಕೋನ ಕೃಷ್ಣಪ್ಪನ ಪ್ರಜ್ಞೆಯಲ್ಲಿ ಗೋಚರವಾಗುತ್ತದೆ. ಕೃಷ್ಣಪ್ಪ ವರ್ಣಿಸುವ ಮತ್ತು ಆಲೋಚಿಸುವ ರೀತಿಯಿಂದ ಆತನಲ್ಲಿರುವ ದ್ವಂದ್ವಾತ್ಮಕ ಮನಃಸ್ಥಿತಿಯು ಕಂಡುಬರುತ್ತದೆ. ಇಂತಹ ದ್ವಂದ್ವಗಳೇ ಆತನ ವ್ಯಕ್ತಿತ್ವವನ್ನು ಮೊದಲಿನಿಂದಲೂ ರೂಪಿಸಿವೆ. ಕೃಷ್ಣಪ್ಪನ ಪಾತ್ರದಲ್ಲಿ ಅಸ್ತಿತ್ವವಾದಿ ಚಿಂತನೆಗಳು, ದ್ವಂದ್ವ ಮನಃಸ್ಥಿತಿ ಮುಂತಾದವುಗಳನ್ನು ಕಾಣಬಹುದಾಗಿದೆ.

ನವ್ಯ ಪಂಥದ ಪ್ರಮುಖ ಲೇಖಕರಾದ ಅನಂತಮೂರ್ತಿಯವರು 'ಅವಸ್ಥೆ' ಕಾದಂಬರಿಯನ್ನು ನವ್ಯದ ಬಹುತೇಕ ಅಂಗಗಳನ್ನು ಆಧಾರವಾಗಿಟ್ಟುಕೊಂಡು ರಚಿಸಿದ್ದಾರೆ. ಕೃಷ್ಣಪ್ಪ ಮಹೇಶ್ವರಯ್ಯನಿಗೆ ಅಂಟಿಕೊಂಡರೂ ಮಹೇಶ್ವರಯ್ಯ ನಡೆಸುವ ಜಂಗಮ ಜೀವನಕ್ಕಿಂತ ಬೇರೆಯಾದ ಸಮಷ್ಟಿ ಜೀವನವನ್ನು ಬಯಸುತ್ತಾನೆ. ಕೃಷ್ಣಪ್ಪ ಹಾಗೂ ನಾಗರಾಜ ಇಬ್ಬರೂ ಮಾರ್ಕ್ಸಿಸ್ಟ್‌ಗಳಾದರೂ ಅವರಿಬ್ಬರಲ್ಲಿ ವಿರುದ್ಧವಾದ ಧೋರಣೆಗಳನ್ನು ಕಾಣುತ್ತೇವೆ. ಕೃಷ್ಣಪ್ಪ ರಾಜಕೀಯಕ್ಕೆ ಇಷ್ಟವಿಲ್ಲದೇ ಬಂದಿದ್ದ ಜೀವನ ಸಫಲವಾಗಲು ಬೇರೆ ದಿಕ್ಕು ಕಾಣದೆ, ಆದರೆ ನಾಗರಾಜ್‌ಗೆ ರಾಜಕೀಯವಲ್ಲದೆ ಬೇರೇನೂ ಕಾಣಿಸುವುದೇ ಇಲ. ಕ್ರಾಂತಿಯಲ್ಲಿಲ್ಲದೇ ಜೀವನ ಸಫಲವಾಗುವ ಬೇರೆ ಮಾರ್ಗಗಳೇ ಇಲ್ಲವೆಂದು ತಿಳಿಸಿದ್ದಾರೆ. ಇಲ್ಲಿ ನಾವು ಇವರಿಬ್ಬರ ಮನಸ್ಥಿತಿಯಲ್ಲಿರುವ ವ್ಯತ್ಯಾಸವನ್ನು ಕಾಣುತ್ತೇವೆ.

ಕಾದಂಬರಿಯಲ್ಲಿ ಕಂಡುಬರುವ ಮತ್ತೊಂದು ಪ್ರಮುಖವಾದ ಅಂಶ ಅಸ್ಥಿತ್ವದ ಪ್ರಶ್ನೆ. ಕಾದಂಬರಿಯಲ್ಲಿ ಬರುವ ಅಣ್ಣಾಜಿಯ ಬದುಕನ್ನು ನೋಡುವವರಿಗೆ ಅಣ್ಣಾಜಿಯ ಎಲ್ಲಾ ಕ್ರಿಯೆಗಳು ಅವನ ಸ್ವೇಚ್ಛಾ ಆಯ್ಕೆ ಎಂದು ಕಾಣಿಸುತ್ತದೆ. ಕಾದಂಬರಿಯ ಕೊನೆಯ ಭಾಗದಲ್ಲಿ ಆಗುವ ಗೌರಿ ಮತ್ತು ಕೃಷ್ಣಪ್ಪರ ದೇಹ ಸಂಬಂಧವೂ ಕೂಡ ಅದನ್ನೇ ತೋರಿಸುತ್ತದೆ. ಕೃಷ್ಣಪ್ಪ ಮತ್ತು ನಾಗರಾಜರ ಭೇಟಿಯಲ್ಲಾಗುವ

ಹಲವಾರು ಸಂಭಾಷಣೆಗಳು ಕೃಷ್ಣಪ್ಪನನ್ನು ಒಬ್ಬ ಅಸ್ಥಿತ್ವವಾದಿಯಾಗಿಯೂ ನಾಗರಾಜನನ್ನು ಒಬ್ಬ ಸ್ಟ್ರಕ್ಚರಲಿಸ್ಟ್ ಆಗಿಯೂ ತೋರಿಸುತ್ತದೆ. ವ್ಯಕ್ತಿವಾದಿಯಾದ ಕೃಷ್ಣಪ್ಪ ಸಮಸ್ಯೆಗಳನ್ನು ಅಸ್ತಿತ್ವವಾದಿ ಸಿದ್ಧಾಂತಗಳ ಬೆಳಕಿನಲ್ಲಿಟ್ಟು ನೋಡುತ್ತಾನೆ. ಅಸ್ತಿತ್ವವಾದ ಹೇಳುವ ಒಂದು ರೀತಿಯ 'ಅಭಿನಯವನ್ನು ಮಹೇಶ್ವರಯ್ಯ ವಾರಂಗಲ್ ಪೋಲಿಸ್ ಸ್ಟೇಷನ್‌ನಲ್ಲಿ ಬಂಧಿಯಾಗಿದ್ದ ಕೃಷ್ಣಪ್ಪನನ್ನು ಬಿಡುಗಡೆಗೊಳಿಸುವಲ್ಲಿ ಪ್ರಯೋಗಿಸುವನು. ಹನುಮನಾಯ್ಕ ಎಂಬುವವನು ಶೂನ್ಯ ಎಂಬ ಅಸ್ಥಿತ್ವವಾದಿ ಪರಿಕಲ್ಪನೆಯನ್ನು ತನ್ನ ಜೀವನದಲ್ಲಿ ತಾನು ಮಾಡುವ ಹಾಸ್ಯ ಘಟನೆಗಳ ಮೂಲಕವೂ, ಜೀವನಕ್ರಮದ ಮೂಲಕವೂ ಚಿತ್ರಿಸುವಂತಹ ಪಾತ್ರ ಹೀಗೆ ಪಾಶ್ಚಾತ್ಯ ಅಸ್ತಿತ್ವವಾದ ಕಾದಂಬರಿಯ ಒಳಗಡೆ ಬಂದ ತತ್‌ಕ್ಷಣ ಪೌರಾತ್ಯ ಸಂಸ್ಕೃತಿಯ ಸಾಂಸ್ಕೃತಿಯ ಚೌಕಟ್ಟಾಗಿ ಬದಲಾಯಿಸುವುದನ್ನು ಕಾಣುತ್ತೇವೆ. ಅವಸ್ಥೆಯು ಪರಂಪರಾಗತ ವಾಸ್ತವವಾದಿ ಕಾದಂಬರಿ ಪ್ರಕಾರಕ್ಕೆ ಸೇರಿದ್ದಾಗಿದ್ದರೂ ವಾಸ್ತವವಾದಿ ಮಾದರಿ ಎಂಬುದು ಕೇವಲ ಒಂದು ತಂತ್ರವಾಗಿ ಮಾತ್ರವೇ ಇರುವುದು ಕಂಡುಬರುತ್ತದೆ. ಈ ತಂತ್ರ ಹೆಚ್ಚು ಮಂದಿ ಓದುಗರನ್ನು ಪಡೆಯುವುದಕ್ಕೆ ಅನಂತಮೂರ್ತಿಯವರಿಗೆ ನೆರವಗುತ್ತದೆ. ಆದರೆ, ಕಾದಂಬರಿ ಸಂಚರಿಸುವ ಬಗೆ ಬೇರೆ ರೀತಿಯದು. ಇದು ಬಹುಪಾಲು 'ಅದು ಮತ್ತು ಇದು' ಎಂಬ ಎದುರು ದ್ವಂದ್ವದ ಒಳಗೆ ಸಿಕ್ಕಿ ಗೊಂದಲಗೊಳ್ಳುವ ಆಲೋಚನಾ ಕ್ರಮವನ್ನು ದಾಟಿ ನಿಲ್ಲುತ್ತದೆ. ಅಂದರೆ 'ಅದು ಮತ್ತು ಇದು' ಘರ್ಷಣೆ ಹೊಂದದೆಯೂ, ಹೊಂದಿಯೋ ಇರುವಂತಹ ಒಂದು ರೀತಿಯ ಮಾಂತ್ರಿಕವಾದ, ಲಯಬದ್ಧವಾದ ವಿಶಿಷ್ಟಾದ್ವೈತ ತರ್ಕದಲ್ಲಿ ಭಾರತೀಯ ಸಮಾಜ ಚಲನೆಯಲ್ಲಿರುವುದಾಗಿ ಈ ಕಾದಂಬರಿಯಲ್ಲಿ ತೋರಿಸುತ್ತದೆ. ಉದಾಹರಣೆಗೆ ಈ ಕಾದಂಬರಿಯಲ್ಲಿ ಬರುವ ಪುರೋಹಿತರಿಗೂ ಕೃಷ್ಣನಿಗೂ ಇರುವ ಸಂಬಂಧ. ಈ ಸಂಬಂಧ ಭಾರತೀಯ ಸಮಾಜದ ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಸಂಬಂಧವನ್ನು ಸಾಂಕಿತಿಕವಾಗಿ ಗುರುತಿಸುತ್ತದೆ.

ಕಾದಂಬರಿಯ ಕೊನೆಯಲ್ಲಿ ಕೃಷ್ಣಪ್ಪನು ದ್ವಂದ್ವದಿಂದ ಪಾರಾಗಲು ಸಕ್ರಿಯ ರಾಜಕಾರಣಕ್ಕೆ ರಾಜೀನಾಮೆ ಕೊಟ್ಟು ತನ್ನ ಹಳ್ಳಿಗೆ ಹಿಂದಿರುಗಿ 'ದಡ ಹತ್ತದವರಿಗೆ ಸಿಟ್ಟು ಬರೋ ಹಾಗೆ' ಪ್ರಯತ್ನಿಸಲು ನಿರ್ಧರಿಸುತ್ತಾನೆ. ಅಂದರೆ ವೈಚಾರಿಕವಾಗಿ ಕಾದಂಬರಿಯ ಕೊನೆ ಮತ್ತು ಕಾದಂಬರಿಯ ಪ್ರಾರಂಭಕ್ಕೆ ಬಂದು ನಿಲ್ಲುತ್ತದೆ. ಕೃಷ್ಣಪ್ಪನು ಹಳ್ಳಿಗೆ ಹಿಂದಿರುಗಿ ಶೋಷಿತರನ್ನು ಒಂದುಗೂಡಿಸಿ ಸಿಟ್ಟಿಗೊಳಿಸುವಂತೆ ಮಾಡಲು ಹನುಮನಾಯ್ಕನಂತೆ ವೈಯಕ್ತಿಕ ನೆಲೆಯಲ್ಲಿಯೇ ಜೀವನದ ಅರ್ಥವನ್ನು ಕಂಡುಕೊಳ್ಳುವುದು ಅಲ್ಲದಿದ್ದರೆ ಮತ್ತೆ ಸಂಘಟನೆಗೆ ಜನ-ಧನಬಲ, ಜನ-ಧನಬಲಕ್ಕಾಗಿ ಮತ್ತೆ ಅಧಿಕಾರ ಮತ್ತೆ ಇರಹಾಸದ ಪುನರಾವೃತ್ತಿ ಶುರುವಾಗುತ್ತದೆ. ಇಂತಹ ವರ್ತುಲಕ್ಕೆ ಕೊನೆ ಎಲ್ಲಿ? ಹೇಗೆ?

"ಕೃಷ್ಣಪ್ಪ ಭ್ರಾಮಕ ಜಗತ್ತಿನಲ್ಲಿ ವ್ಯವಹರಿಸುವುದಿಲ್ಲ. ಅವನ ವ್ಯಕ್ತಿತ್ವದಲ್ಲಿ ದೋಷಗಳನ್ನು ಕಾಣಬಹುದು. ಉದಾಹರಣೆಗಾಗಿ ಕ್ಷುದ್ರತೆಯೊಡನೆ ಅವನ obsession ಇದು ಅವನನ್ನು ಹೆಂಡತಿಯನ್ನು ಹೊಡೆಯುವಂಥ ಅರ್ಥಹೀನವಾದ ಹಿಂಸೆಗೆ ಎಳೆಯುತ್ತದೆ ಮತ್ತು ಅವನ ಮಾನವೀಯತೆಯಲ್ಲಿಯ ಕೊರತೆಯನ್ನು ಎತ್ತಿ ತೋರಿಸುತ್ತದೆ. ಇಂದಿನ ಉಧ್ವಸ್ತ ನಾಗರೀಕತೆಯಲ್ಲಿ ಮಾನವನಾಗಿ ಬಾಳುವುದು ಹೇಗೆ? ಎನ್ನುವ ಸಮಕಾಲೀನ ಆಹ್ವಾನಕ್ಕಿಂತ Mystic and Heroic ಆದರ್ಶಗಳೇ ಕೃಷ್ಣಪ್ಪನಿಗೆ (ಬಹುಶಃ ಅನಂತಮೂರ್ತಿಯವರಿಗೂ ಕೂಡ) ಹೆಚ್ಚು ಪ್ರಸ್ತುತವಾಗಿ ಕಾಣುತ್ತದೆ."[೧]

**ಕೊನೆಯದಾಗಿ ಒಂದು ಮಾತು** : ವೈಚಾರಿಕ ನೆಲೆಯಲ್ಲಿ ಅನಂತಮೂರ್ತಿಯವರು ಚಿತ್ರಿಸಿರುವಂತೆ ಕೃಷ್ಣಪ್ಪನ ಸೋಷಲಿಸ್ಟ್ ಮಾರ್ಗ ಅಷ್ಟು ಅನಿವಾರ್ಯವಾಗಿ ಸೋಲಬೇಕಾಗಿಲ್ಲವೆಂದು ಅನಿಸುತ್ತದೆ. ಅಂದರೆ ಸೈದ್ಧಾಂತಿಕವಾಗಿ ಲೇಖಕರು 'ನಿಹಿಲಿಸ್ಟ್' ಆಗಿದ್ದಾರೆಯೆ ಎಂದು ಸಹಜವಾಗಿಯೇ ತೋರಬಹುದು. ಹಾಗೆಯೇ ಕೃಷ್ಣಪ್ಪ ಹಾಗೂ ಅಣ್ಣಾಜಿ ಇವರ ಪಾತ್ರಗಳಿಗೆ ಜಿದ್ದಿರುವ ಒತ್ತಿನಿಂದ ಇತರ ಪಾತ್ರಗಳು ಮುಖ್ಯವಾಗಿ ಕೃಷ್ಣಪ್ಪನ ಹೆಂಡತಿ ಮತ್ತು ಲೂಸಿನಾ ಮುಂತಾದ ಸ್ತ್ರೀ ಪಾತ್ರಗಳು ಅನಗತ್ಯವಾಗಿ ಪೇಲವವಾಗಿವೆಯೆಂದೆನಿಸಬಹುದು. ಆದರೆ ಕೃತಿ, ಅದು ಯಾವುದೇ ಆಗಿರಲಿ ನಮಗೆ ಮುಖ್ಯವಾಗುವುದು ಅದು ತನ್ನ ಶರೀರದಲ್ಲಿ ಒಳಗೊಳ್ಳುವ ಗಂಭೀರ ಚಿಂತನೆ ವಿಶ್ಲೇಷಣೆಗಳಿಂದ ಅದು ಕೊನೆಗೆ ಕೊಡುವ ತೀರ್ಮಾನಗಳಿಂದ ಅಲ್ಲ. ಈ ದೃಷ್ಟಿಯಿಂದ ಆಧುನಿಕ ಸಮಾಜ ರಚನೆಗಳನ್ನು ಹಾಗೂ ವ್ಯವಸ್ಥೆಗಳನ್ನು ಅತ್ಯಂತ ಕಾಳಜಿಯಿಂದ ನಿಷ್ಠುರವಾಗಿ ಶೋಧಿಸುವ ಪರೀಕ್ಷಿಸುವ ಕೆಲವೇ ಸಾಹಿತ್ಯ ಕೃತಿಗಳಲ್ಲಿ 'ಅವಸ್ಥೆ' ಮುಖ್ಯವಾದುದು. 'ಅವಸ್ಥೆ' ಒಂದು ರಾಜಕೀಯ ಕಾದಂಬರಿಯಾಗಿರುವುದರಿಂದ ಮತ್ತು ಕೃತಿಯು ಪ್ರತಿಫಲಿಸುವ ವೈಚಾರಿಕತೆ ನಮ್ಮ ಇಂದಿನ ಸಮಾಜದಲ್ಲಿ ಅತ್ಯಂತ ಮಹತ್ವವೆಂದು ಹೇಳಬಹುದು.

ಸಾಹಿತ್ಯ ಕೇವಲ ಆನಂದ ಕೊಟ್ಟರೆ ಸಾಲದು, ರಸಾನಂದ ಅದರ ಮುಖ್ಯ ಕೆಲಸ ಬದುಕಿಗೆ ಪ್ರತ್ಯಕ್ಷವಲ್ಲವಾದರೂ ಪರೋಕ್ಷ ಪ್ರಯೋಜನ ಸಾಹಿತ್ಯದಿಂದ ಆಗಬೇಕು. ಯಾವುದು ಬದುಕಿನ ಹಲವು ಮುಖಗಳನ್ನು ಕುರಿತು ಆಲೋಚಿಸುವಂತೆ ಮಾಡುತ್ತದೋ ಅದು ಶ್ರೇಷ್ಠವಾಗುತ್ತದೆ. ಡಾ॥ ಎಸ್.ಎಲ್. ಭೈರಪ್ಪನವರ ಕಾದಂಬರಿ **'ಮತದಾನ'** ಆ ಕೆಲಸ ಮಾಡುತ್ತದೆ.

ಸಮಕಾಲೀನ ಸಾಹಿತ್ಯ ಸಂದರ್ಭದಲ್ಲಿ ಡಾ॥ ಎಸ್.ಎಲ್. ಭೈರಪ್ಪ ಅವರ ಹೆಸರು ಮೇಲಿಂದ ಮೇಲೆ ಕೇಳಿಬರುತ್ತದೆ. ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಕಾಣಿಸಿಕೊಂಡ ನವೋದಯ, ಪ್ರಗತಿಶೀಲ, ನವ್ಯ, ನವೋತ್ತರ ಅಥವಾ ಬಂಡಾಯ ಇತ್ಯಾದಿ ಚಳುವಳಿಗಳಿಗೆ ಯಾವುದೇ ರೀತಿಯಲ್ಲಿ ಸ್ಪಂಧಿಸದೆ

೧. ಕನ್ನಡ ಕಥನ ಸಾಹಿತ್ಯ : ಕಾದಂಬರಿ – ಜಿ.ಎಸ್. ಅಮೂರ – ಪುಟ – ೩೧೨

ತಮ್ಮದೇ ಆದ ವಿಚಾರದರ್ಶನ, ಕಾಣ್ಕೆಗಳೊಂದಿಗೆ ಒಂದು ವಿಶಿಷ್ಟ ಸಾಹಿತ್ಯ ಪ್ರಕಾರಕ್ಕೆ ಬದ್ಧವಾಗಿ ನಿರಂತರ ಸೃಜನಶೀಲ ಪ್ರಕ್ರಿಯೆಯಲ್ಲಿ ತೊಡಗಿಸಿಕೊಂಡ ಇವರು ಜನಪ್ರಿಯ ಲೇಖಕರೆನಿಸಿಕೊಂಡಿದ್ದಾರೆ.

ತತ್ವಶಾಸ್ತ್ರ ಭಾರತೀಯ ಸಂಸ್ಕೃತಿ ಸನಾತನ ಪರಂಪರೆ ಭಾರತೀಯ ಸಮಾಜದ ಮೌಲ್ಯಗಳು, ಐತಿಹಾಸಿಕ ಪರಂಪರೆ ಇತ್ಯಾದಿಗಳ ಬಗ್ಗೆ ಅಚಲ ಶ್ರದ್ಧೆ ನಂಬಿಕೆಗಳನ್ನು ಇರಿಸಿಕೊಂಡು ತಮ್ಮ ಕೃತಿಗಳಲ್ಲಿ ಇವುಗಳನ್ನು ಹಿನ್ನೆಲೆಯಾಗಿಸಿಕೊಂಡು ಆಧುನಿಕ ವಿಚಾರ ಚಿಂತನೆಗಳ ಬೆಳಕಿನಲ್ಲಿ ಅನ್ವೇಷಣೆಗೆ ತೊಡಗುತ್ತಾರೆ. ವಿಶಾಲ ಹರಹನ್ನುಳ್ಳ ಕಾದಂಬರಿ ಸ್ವರೂಪಕ್ಕೆ ಬದ್ಧರಾಗಿರುವುದು ಅವರ ವೈಶಿಷ್ಟ್ಯ.

ಕಾದಂಬರಿಯಲ್ಲಿ ಡಾ॥ ಶಿವಪ್ಪನವರ ಒಬ್ಬ ಸಾಮಾನ್ಯ ವ್ಯಕ್ತಿಯನ್ನು ನಾಯಕನನ್ನಾಗಿ ಆರಿಸುವುದರಲ್ಲಿಯೇ ಭೈರಪ್ಪನವರ ಕಾದಂಬರಿಯ ಸ್ವರೂಪ ಬದಲಾದುದನ್ನು ಕಾಣುತ್ತೇವೆ.

ಜನತಾ ಸೇವೆಯನ್ನು ಸಲ್ಲಿಸಲು ಹಿಂದೆ ಎಂದೋ ರಂಗಲಕ್ಷ್ಮಿಯಂತವಳನ್ನು ಮದುವೆ ಮಾಡಿಕೊಳ್ಳಬೇಕಾಗಿದ್ದ ತನಗೆ ಈಗ ಇಂಥ ಹೆಂಡತಿಯ ಅವಶ್ಯಕತೆ ಇದೆ ಎಂದು ಒಂದು ಧ್ಯೇಯ ಸಾಧನೆಗಾಗಿ ರಂಗಲಕ್ಷ್ಮಿಯ ಕೈ ಹಿಡಿಯಬೇಕೆನ್ನುವ ಶಿವಪ್ಪನ ವಿಚಾರ ಬಹಳಷ್ಟು ಆಳದಿಂದ ಕೂಡಿದ್ದಾಗಿದ್ದರ ಜೊತೆಗೆ ಭೈರಪ್ಪನವರ ತಾತ್ವಿಕತೆ ಕೊನೆಯಲ್ಲಿ ಮೈಯೆತ್ತಿ ನಿಂತದ್ದು ಕಂಡುಬರುತ್ತದೆ. ಪ್ರಜಾಪ್ರಭುತ್ವ ಪದ್ಧತಿಯನ್ನು ಇನ್ನೂ ಸರಿಯಾಗಿ ಅರ್ಥಮಾಡಿಕೊಂಡಿರದ ಭಾರತೀಯರ ಜೀವನದ ಮೌಲ್ಯಗಳು ಹೇಗೆ ಅಸ್ತವ್ಯಸ್ತವಾಗುತ್ತದೆ ಎಂಬುದನ್ನು ಕಲ್ಪನಾಂಶ ಮತ್ತು ತಾತ್ವಿಕಾಂಶಗಳನ್ನು ಕಡಿಮೆಗೊಳಿಸಿ ಹೆಚ್ಚು ವಾಸ್ತವಿಕಾಂಶವನ್ನು ದಂಡಿಸಿಕೊಂಡು ರಚಿತವಾಗಿದೆ. ಜೊತೆಗೆ ಭೈರಪ್ಪನವರು ಬದ್ಧತೆಯಿಂದ ಬಿಡುಗಡೆ ಹೊಂದಿ ವಾಸ್ತವತೆಯತ್ತ ಹೊರಳಿ ನಮ್ಮ ಸಮಸ್ತ ರಾಜಕೀಯವನ್ನು ಪ್ರತಿನಿಧಿಸುವ ಮತದಾನವನ್ನು ಬರೆದಿದ್ದಾರೆ.

ಮತದಾನದಲ್ಲಿ ಡಾ॥ ಶಿವಪ್ಪನ ಪಾತ್ರವನ್ನು ಏಕಕಾಲಕ್ಕೆ ಆಶ್ಚರ್ಯ ಆನಂದ ಉಂಟಾಗುವಂತೆ ಚಿತ್ರಿಸಿದ್ದಾರೆ. ಭೈರಪ್ಪನವರು ಇವತ್ತಿನ ಹಳ್ಳಿಗಳಲ್ಲಿ ಇಂತಹ ಡಾಕ್ಟರರು ಸಿಗುವರೇ ಎಂಬ ಸಂದೇಹವು ಬುರುವುದು ಖಚಿತ. ಉಳ್ಳವರಿಂದ ಔಷಧಿಗೆ ತಗಲುವ ದುಡ್ಡಿನಷ್ಟೆ ತೆಗೆದುಕೊಳ್ಳುವ ಹಾಗೂ ಬಡವರಿಗೆ ಪುಕ್ಕಟೆಯಾಗಿ ಚಿಕಿತ್ಸೆ ಮಾಡುವ ಆದರ್ಶವಾದವು ನಮ್ಮನ್ನು ಸೆರೆಹಿಡಿಯುತ್ತದೆ. ಗಾಂಧೀಯುಗದ ಆದರ್ಶವನ್ನು ಈತನಲ್ಲಿ ನಾವು ಕಾಣಬಹುದು. ಅನಂತಮೂರ್ತಿಯವರ 'ಅವಸ್ಥೆ'ಯ ಕೃಷ್ಣಪ್ಪನ 'ಮತದಾನ'ದ ಡಾ॥ ಶಿವಪ್ಪನ ಆದರ್ಶಗಳು ಸೋತರೂ ಶಿವಪ್ಪನ ಪಾತ್ರ ಸ್ವಲ್ಪ ಭಿನ್ನವಾಗಿ ಚಿತ್ರವಾಗಿದೆ. ಈತನೂ ಕೂಡ

ಅಲ್ಲಲ್ಲಿ ಪರಿಸ್ಥಿತಿಗಳಿಂದ ವ್ಯಕ್ತಿಗಳಿಂದ ಅಲ್ಲಲ್ಲಿ ಸೋತರೂ ತನ್ನ ಆದರ್ಶವನ್ನು ಉಳಿಸಿಕೊಳ್ಳುತ್ತಾನೆ. ಕಾದಂಬರಿಯ ಕೊನೆಯಲ್ಲಿ ತನ್ನ ಆದರ್ಶವನ್ನು ಎತ್ತಿ ಹಿಡಿಯುತ್ತದೆ.

ಭೈರಪ್ಪನವರ ಯಾವುದೇ ಕಾದಂಬರಿಯಲ್ಲಿ ಯಾವುದಾದರೊಂದು ತತ್ವ ಅಡಕವಾಗಿರುತ್ತದೆ. ಬದ್ಧತೆಯಿಂದ ಬಿಡುಗಡೆ ಹೊಂದಿ ವಾಸ್ತವತೆಯತ್ತ ಹೊರಳಿ ನಮ್ಮ ಸಮಸ್ತ ರಾಜಕೀಯವನ್ನು ಪ್ರತಿನಿಧಿಸುವ 'ಮತದಾನ'ವನ್ನು ಬರೆದಿದ್ದಾರೆ. ಭೈರಪ್ಪನವರ ಕಾದಂಬರಿಗಳ ಹಿನ್ನೆಲೆಯಲ್ಲಿ ಆಳವಾದ ಅಭ್ಯಾಸ ಚಿಂತನೆಗಳಿವೆ. ತಮ್ಮ ಚಿಂತನೆಗೆ, ನಂಬಿಕೆಗೆ, ಪರರಿಸರೆಗೆ ಒಗ್ಗುವಂಥ ಜೀವನ, ಪಾತ್ರ, ಸನ್ನಿವೇಶಗಳನ್ನು ಅವರು ಹುಡುಕುತ್ತಾರೆ. ಜೀವನದಿಂದ ತತ್ವಗಳಲ್ಲಿ ತತ್ವಗಳ ಮೂಲಕ ಜೀವನಕ್ಕೆ ಬರುತ್ತಾರೆ. ಆದ್ದರಿಂದ ಅವರ ಕೃತಿಗಳಲ್ಲಿ ಕತೆ ಸನ್ನವೇಶ ವಿವರಗಳು ಮುಖ್ಯವಾಗುತ್ತದೆ.

"ಮನುಷ್ಯನ ಸ್ವಭಾವ ಆಸೆ, ಆಕಾಂಕ್ಷೆ ಉನ್ನತ ನೀಚ ಪ್ರವೃತ್ತಿಗಳು ಮೊದಲಾದವುಗಳನ್ನು ಆರಿಸಿ ಕಂಡುಕೊಳ್ಳಬೇಕಾದುದು ಸತ್ಯದಲ್ಲೆ ಹೊರತು ಬಾಹ್ಯ ಜಗತ್ತನ್ನು ಅಳೆಯುವ ಭೌತಖಗೋಳ ಭೌತಶಾಸ್ತ್ರದ ಸತ್ಯದಲ್ಲಲ್ಲ; ಇದರ ಆಚೆಗೆ ಜಿಜ್ಞಾಸೆ ಮಾಡುವ ತತ್ವಶಾಸ್ತ್ರದ ಸತ್ಯದಲ್ಲಲ್ಲ; ಮನುಷ್ಯ ಜೀವನದ ಆಚೆ ಮತ್ತು ಈಚೆಗಿನ ಪ್ರಶ್ನೆಗಳನ್ನು ಚಿಂತಿಸುವ ಮತಧರ್ಮದ ಸತ್ಯಗಳಲ್ಲಿ ಅಲ್ಲ; ಸತ್ಯವನ್ನು ಮೂರ್ತರೂಪದಲ್ಲಿ ಅನ್ವೇಷಿಸುವುದು ಸಾಹಿತ್ಯವೊಂದೇ ಎಂಬುದು ಅರ್ಥವಾಯಿತು".[೧] ಭೈರಪ್ಪನವರು ಈ ಮೇಲಿನ ಹಿನ್ನೆಲೆಯ ಕಾರಣದಿಂದಲೇ ಸೃಷ್ಟಿ ಕ್ರಿಯೆಗೆ ತೊಡಗಿದವರು ಇವರ ಎಲ್ಲಾ ಕಾದಂಬರಿಗಳು ಧ್ವನಿಸುವುದು ಈ ಅಂಶಗಳನ್ನು.

ಈ ಹಿನ್ನೆಲೆಯಲ್ಲಿ ಭೈರಪ್ಪನವರ ಮತದಾನ ಕಾದಂಬರಿಯನ್ನು ಸಹಜವಾಗಿ ನೋಡಿದಾಗ ಯಾವುದೋ ಚುನಾವಣೆಯ ಗ್ರಂಥವಿರಬೇಕೆಂದು ಕಲ್ಪನೆ ಬರುವುದುಂಟು ವಿಧಾನಸಭೆಯ ಚುನಾವಣೆ ಇರುವುದರ ಜೊತೆಗೆ ಬದುಕಿನ ಬಗ್ಗೆ ತನ್ನ ಮತ ನೀಡುವ ಒಬ್ಬ ಪ್ರಾಮಾಣಿಕ ಗಾಂಧೀಕಾಲದ ನಿಸ್ವಾರ್ಥಿ ಸಮಾಜ ಸೇವಕ ಡಾಕ್ಟರನ ಜೀವನೋದ್ದೇಶ ಇಲ್ಲಿ ಅಡಕವಾಗಿದೆ.

ಭೈರಪ್ಪನವರ ಬರಹದ ಹಿಂದೆ ತತ್ವಶಾಸ್ತ್ರವು ಬದಲಾಗಿ ನಿಂತಿದ್ದರಿಂದ ಸಮಾಜದ ಸಮಕಾಲೀನ ವಾಸ್ತವಿಕ ಘಟನೆಗಳನ್ನಾಧರಿಸಿ ಕೃತಿಗೆ ತೊಡಗುವುದರಿಂದ ಭೈರಪ್ಪನವರ ಎಲ್ಲಾ ಕಾದಂಬರಿಗಳಲ್ಲಿ ಗಂಭೀರ ಚಿಂತನೆಯೊಂದು ಕೆಲಸ ಮಾಡಿದಂತೆ ತೋರುವುದು. ಭೈರಪ್ಪನವರು ನವ್ಯ ನವೋದಯದವರಂತೆ ಯಾವ ಹಣೆಪಟ್ಟಿಯನ್ನು ಹಚ್ಚಿಕೊಂಡು ಹೊರಡದಿದ್ದರೂ, ಬದುಕಿನ ಗಂಭೀರ ವಿಷಯಗಳನ್ನೆತ್ತಿ ಬರೆಯುವುದರಿಂದ ಶಿವರಾಮ ಕಾರಂತರ ತರುವಾಯ ಇವರು ಕನ್ನಡಕ್ಕೆ ಸಿಕ್ಕ ಒಬ್ಬ ಶ್ರೇಷ್ಠ ಕಾದಂಬರಿಕಾರರು ಎನ್ನುವುದರಲ್ಲಿ ಸಂದೇಹವಿಲ್ಲ.

---

೧. ಎಸ್.ಎಲ್. ಭೈರಪ್ಪ : ನಾನೇಕೆ ಬರೆಯುತ್ತೇನೆ – ಪುಟ – ೭

## ಅಧ್ಯಾಯ – ೭

# ಉಪಸಂಹಾರ

'ರಾಜಕಾರಣ ಎನ್ನುವುದು ನೀತಿಹೀನರ ಕಟ್ಟಕಡೆಯ ದಂಥ' ಎನ್ನುವ ಮಾತೊಂದು ಆಂಗ್ಲಭಾಷೆಯಲ್ಲಿ ಇದೆ. ನಮ್ಮ ದೇಶದ ರಾಜಕಾರಣಕ್ಕೆ ಈ ಮಾತು ಅಕ್ಷರಶಃ ಅನ್ವಯಿಸುತ್ತದೆ. ದೇಶಸೇವೆ, ಜನಸೇವೆ ಎಂಬಂತಹ ಆಕರ್ಷಕ ಮಾತುಗಳ ಮರೆಯಲ್ಲಿ ನಮ್ಮ ರಾಜಕೀಯ ಧುರೀಣರು ನಡೆಸುತ್ತಿರುವ ಸ್ವಾರ್ಥತೆ, ಸಮಯ ಸಾಧಕತನಗಳ ಫಲವಾಗಿ ಸಾಮಾಜಿಕ ಜೀವನದಲ್ಲಿ ಭ್ರಷ್ಟತೆ ವ್ಯಾಪಕವಾಗಿ ಬೇರು ಬಿಟ್ಟಿದೆ. ಜಾತೀಯತೆ ಧಾರ್ಮಿಕ ಅಂಧಾಭಿಮಾನಗಳು ರಾಜಕಾರಣದ ಆಶ್ರಯದಲ್ಲಿ ಕೊಚ್ಚಿ ಹೋಗಿದ್ದು ಶ್ರೀ ಸಾಮಾನ್ಯನ ಜೀವನ ಅಸಹನೀಯ 'ದೆಸ'ಗೆ ತಲುಪಿದೆ. ದೇಶಭಕ್ತಿ, ದೇಶಸೇವೆ, ತ್ಯಾಗ ಮುಂತಾದ ಸ್ವಾತಂತ್ರಪೂರ್ವದ ಮಾತುಗಳು ಅರ್ಥಹೀನವಾಗಿಯಷ್ಟೇ ಅಲ್ಲ, ಶ್ಲೇಷೆ ವ್ಯಂಗಕ್ಕೂ ಪಕ್ಕಾಗಿವೆ. ಬಿಳಿ ಅರಸರ ಆಡಳಿತದಿಂದ ಪಾರಾದರೆ ಸ್ವಾತಂತ್ರ ಭಾರತದಲ್ಲಿ ಸಮೃದ್ಧಿಯ ತಾಂಡವವಾಡುತ್ತೇವೆಂದು ಕನಸು ಕಂಡಿದ್ದವರೀಗ ಸಮೃದ್ಧಿಯ ಬದಲು ಭ್ರಷ್ಟತೆಯು ನರ್ತನಗೈಯುತ್ತಿರುವ ವಾಸ್ತವದ ಬಿಸಿಗೆ ಸಿಲುಕಿ ಬೆಚ್ಚಿದ್ದಾರೆ. ಬಿಳಿ ಬಟ್ಟೆಯು ಈಗಿನ ಹೊಸ ದೊರೆಗಳ ಕಾರುಬಾರುವಿನಲ್ಲಿ ಪ್ರಜೆ ಕಂಗಾಲಾಗಿದ್ದಾನೆ. 'ಮೌಲ್ಯಾಧಾರಿತ ರಾಜಕಾರಣ' ಎಂಬ ಮಾತೂ ಸಹ ಇಂದು ಗೇಲಿಗೆ ಒಳಗಾಗಿದೆ. ಇಂತಹ ರಾಜಕಾರಣ ನಮಗೆ ಬೇಕೇ, ರಾಜಕಾರಣಿಗಳು ಮತ್ತು ರಾಜಕಾರಣ ಇಲ್ಲದೆ ಸಮಾಜ ನಿರ್ಮಿಸಲು ಸಾಧ್ಯವಿಲ್ಲವೆ? ಎಂಬುದನ್ನು ಪ್ರಜೆಗಳು ಚಿಂತಿಸಬೇಕಾಗುತ್ತವೆ.

ಇಂತಹ ವಸ್ತುವನ್ನು ತೆಗೆದುಕೊಂಡ ಲೇಖಕರುಗಳು ಇವುಗಳನ್ನು ಹೇಗೆ ನಿರ್ವಹಿಸಿದ್ದಾರೆ. ಅವರ ಮನೋಧರ್ಮಗಳು ವಸ್ತು ನಿರ್ವಹಣೆಯಲ್ಲಿ ಹೇಗೆ ಕೆಲಸಮಾಡಿದೆ. ಇವುಗಳನ್ನೆಲ್ಲ ಆಧಾರವಾಗಿಟ್ಟುಕೊಂಡು 'ಅವಸ್ಥೆ' ಮತ್ತು 'ಮತದಾನ' ಕಾದಂಬರಿಗಳನ್ನು ತೌಲನಿಕವಾಗಿ ವಿಶ್ಲೇಷಿಸಲಾಗಿದೆ. ಈ ನಿಬಂಧದಲ್ಲಿ ಒಟ್ಟಾರೆಯಾಗಿ ವ್ಯಕ್ತಗೊಂಡಿರುವ ಅಂಶಗಳನ್ನು ಈ ಕೆಳಕಂಡಂತೆ ವಿವರಿಸಲಾಗಿದೆ. ಈ ಅಧ್ಯಾಯವನ್ನು ಸೇರಿ ಒಟ್ಟು ಏಳು ಅಧ್ಯಾಯಗಳಲ್ಲಿ ಈ ನಿಬಂಧವನ್ನು ಬಿಡಿ–ಬಿಡಿಯಾಗಿ ನಿರೂಪಿಸಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ವಿಷಯವನ್ನು ಆಯ್ದುಕೊಂಡ ಉದ್ದೇಶ, ವ್ಯಾಪ್ತಿ ಹಾಗೂ ಕೃತಿಗಳಲ್ಲಿ ವಿಷಯಗಳು ನಿರೂಪಣೆಗೊಂಡಿರುವ ಬಗೆಯನ್ನು ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ 'ಅವಸ್ಥೆ' ಕಾದಂಬರಿಯ ವಸ್ತುವಿನ ಸ್ವರೂಪ, ವಿನ್ಯಾಸ ಮತ್ತು ಕಥಾ ವಿನ್ಯಾಸ ಹಾಗೂ "ಮತದಾನ" ಕಾದಂಬರಿಯ ವಸ್ತುವಿನ ಸ್ವರೂಪ, ವಿನ್ಯಾಸ ಮತ್ತು ಕಥಾ

ವಿನ್ಯಾಸ ಕಾದಂಬರಿಯಲ್ಲಿ ವಸ್ತುವನ್ನು ಹೇಗೆ ದುಡಿಸಿಕೊಂಡಿದ್ದಾರೆ ಎಂಬುದನ್ನು ಕುರಿತು ಚರ್ಚಿಸಲಾಗಿದೆ. ಮೂರನೆಯ ಅಧ್ಯಾಯದಲ್ಲಿ 'ಅವಸ್ಥೆ' ಕಾದಂಬರಿಯ ಪಾತ್ರಗಳನ್ನು ಕುರಿತು ದೀರ್ಘವಾಗಿ ವಿವೇಚಿಸಲಾಗಿದೆ. ಕಾದಂಬರಿಯ ನಾಯಕನ ಪಾತ್ರ, ಆ ಪಾತ್ರದ ನಿಲುವು ಧೋರಣೆಗಳು ಈ ಪಾತ್ರಕ್ಕೆ ಪೂರಕವಾಗಿ ಬರುವಂತಹ ಕಾದಂಬರಿಯ ಇನ್ನಿತರ ಪಾತ್ರಗಳು ಇವುಗಳನ್ನು ಕಾದಂಬರಿಕಾರರು ನಿರ್ವಹಿಸಿರುವ ಬಗೆ, ಕಾದಂಬರಿಯಲ್ಲಿ ಕಂಡು ಬರುವ ಸ್ತ್ರೀ ಪಾತ್ರಗಳು ಅವುಗಳನ್ನು ಕಾದಂಬರಿಕಾರರು ಹೇಗೆ ದುಡಿಸಿಕೊಂಡಿದ್ದಾರೆ ಹಾಗೂ ಇಲ್ಲಿನ ಪಾತ್ರಗಳು ಎತ್ತಿಹಿಡಿಯುವ ಮೌಲ್ಯಗಳಾವುವು ಎಂಬುದನ್ನು ವಿವೇಚಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ 'ಮತದಾನ' ಕಾದಂಬರಿಯ ಪಾತ್ರಗಳು, ಅವುಗಳು ಆಚರಿಸುವ ಮೌಲ್ಯ ಅಥವಾ ಆದರ್ಶಗಳು, ಆ ಪಾತ್ರಗಳ ನಿಲುವೇನು, ಈ ಕಾದಂಬರಿಯಲ್ಲಿ ಪಾತ್ರ ಚಿತ್ರಣವು ಎಷ್ಟು ಸಮರ್ಥಕವಾಗಿ ಮೂಡಿ ಬಂದಿದೆ. ಪಾತ್ರಗಳನ್ನು ಕಾದಂಬರಿಕಾರರು ಹೇಗೆ ದುಡಿಸಿಕೊಂಡಿದ್ದಾರೆ ಎಂಬುದನ್ನು ದೀರ್ಘವಾಗಿ ವಿಶ್ಲೇಷಿಸಲಾಗಿದೆ.

ಐದನೆಯ ಅಧ್ಯಾಯವು ನಿಬಂಧದ ಪ್ರಮುಖ ಅಂಶವನ್ನು ಎತ್ತಿ ಹಿಡಿಯುತ್ತದೆ. ಅಂದರೆ 'ಅವಸ್ಥೆ' ಹಾಗೂ 'ಮತದಾನ' ಕಾದಂಬರಿಗಳಲ್ಲಿ ಕಂಡು ಬರುವ ಸಾಮ್ಯ ವೈಷಮ್ಯಗಳನ್ನು ವಿವರಿಸಲು ಅನುಕೂಲವಾಗುವಂತೆ ಈ ಅಧ್ಯಾಯವನ್ನು ಮೂರು ವಿಭಾಗಗಳಾಗಿ ಮಾಡಿಕೊಳ್ಳಲಾಗಿದೆ. ಅವುಗಳೆಂದರೆ, ವಸ್ತುವಿನ ಸ್ವರೂಪ, ಪಾತ್ರಸಂಬಂಧ, ಅಭಿವ್ಯಕ್ತಿ ಸಂಬಂಧ ಈ ಮೂರು ನೆಲೆಗಳಲ್ಲಿ ಮೊದಲನೆಯದಾದ ವಸ್ತುವಿನ ಸ್ವರೂಪದಲ್ಲಿ ಎರಡೂ ಕಾದಂಬರಿಗಳಲ್ಲಿ ವಸ್ತುವಿಗಿರುವ ಸಾಮ್ಯ ವೈಷಮ್ಯಗಳನ್ನು ವಿವರಿಸುವುದಲ್ಲದೆ, ವಸ್ತುವನ್ನು ಲೇಖಕರು ನಿರೂಪಿಸುವ ಬಗೆ, ಲೇಖಕರ ಮನೋಧರ್ಮ ಆ ವಸ್ತುವಿನ ಮೇಲೆ ಹೇಗೆ ಕೆಲಸ ಮಾಡಿದೆ. ಅವರು ತಳೆಯುವ ನಿರ್ಧಾರಗಳು ಇತ್ಯಾದಿಗಳನ್ನು ಕುರಿತು ಚರ್ಚಿಸಲಾಗಿದೆ.

ಎರಡನೆಯ ಭಾಗವಾದ ಪಾತ್ರ ಸಂಬಂಧದ ವಿವೇಚನೆಯಲ್ಲಿ ಎರಡೂ ಕಾದಂಬರಿಗಳ ಪಾತ್ರಗಳಲ್ಲಿರುವ ಹೋಲಿಕೆ ವ್ಯತ್ಯಾಸಗಳನ್ನು ಕುರಿತು ಚಿತ್ರಿಸಲಾಗಿದೆ. ಕಾದಂಬರಿಕಾರರ ಪರಿಸರ, ಮನೋಧರ್ಮಗಳು ಪಾತ್ರಗಳಲ್ಲಿ ಹೇಗೆ ಪ್ರಕಟಗೊಂಡಿವೆ. ಕಾದಂಬರಿಕಾರರು ಸ್ತ್ರೀ ಪಾತ್ರಗಳಿಗೆ ನೀಡಿರುವ ಪ್ರಾಧಾನ್ಯವನ್ನು ಕುರಿತು ಚಿಂತಿಸಲಾಗಿದೆ. ಪಾತ್ರದ ಸ್ವಭಾವವು ಲೇಖಕರ ನಲುವನ್ನು ಎತ್ತಿಹಿಡಿಯಲು ಹೇಗೆ ಸಮರ್ಥವಾಗಿದೆ ಎಂಬುದನ್ನು ಕುರಿತು ದೀರ್ಘವಾಗಿ ವಿಶ್ಲೇಷಿಸಲಾಗಿದೆ.

ಮೂರನೇ ವಿಭಾಗದಲ್ಲಿ ಅಭಿವ್ಯಕ್ತಿ ಸಂಬಂಧವಾಗಿ ಎರಡೂ ಕೃತಿಗಳನ್ನು ಹೋಲಿಸಿ ವಿವರಿಸಲಾಗಿದೆ. ಈ ಲೇಖಕರಗುಳಲ್ಲಿರುವ ಸೃಜನಶೀಲತೆಯ ಮಟ್ಟ ಕಾವ್ಯಾತ್ಮಕ ಭಾಷೆ ಮತ್ತು ಅದನ್ನು ಬಳಸಿಕೊಂಡಿರುವ ಬಗೆ, ಶೈಲಿ, ಭಾಷೆ ಲೇಖಕರ ಮಾರ್ಗ ಇತ್ಯಾದಿಗಳನ್ನು ಕುರಿತು ಚರ್ಚಿಸಲಾಗಿದೆ. ಹೀಗೆ ಈ ಅಧ್ಯಾಯದಲ್ಲಿ ಎರಡೂ ಕಾದಂಬರಿಗಳನ್ನು ತುಲನಾತ್ಮಕ ದೃಷ್ಟಿಯಿಂದ ನೋಡಿ ವಿವರಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ಲೇಖಕರ ದೃಷ್ಟಿಕೋನದಲ್ಲಿರುವ ಪರಸ್ಪರ ಹೋಲಿಕೆ ಭಿನ್ನತೆಯನ್ನು ಮತ್ತು ಲೇಖಕರಿಗೆ ಪ್ರಭಾವ ಬೀರಿರುವ ವಸ್ತುಗಳು, ವ್ಯಕ್ತಿಗಳು ಮತ್ತು ಪ್ರಭಾವ ಬೀರಿರುವ ಇತರೆ ಅಂಶಗಳಾದ ವಾಸ್ತವವಾದ, ವೈಚಾರಿಕತೆ, ಮಾನವತಾವಾದ, ಅಸ್ತಿತ್ವವಾದ ಇತ್ಯಾದಿ ಅಂಶಗಳು ಕೃತಿಯಲ್ಲಿ ಹೇಗೆ ಮೂಡಿ ಬಂದಿದೆ ಮತ್ತು ಅದು ವಸ್ತುವನ್ನು ಹೇಗೆ ನಿರೂಪಿಸುತ್ತದೆ ಎಂಬುದನ್ನು ಕುರಿತು ವಿವೇಚಿಸಲಾಗಿದೆ.

ಕೊನೆಯ ಅಧ್ಯಾಯವಾದ ಈ ಅಧ್ಯಾಯದಲ್ಲಿ ನಿಬಂಧದ ಸಂಕ್ಷಿಪ್ತ ಪರಿಚಯ ಮಾಡಿಕೊಡಲಾಗಿದೆ. ಇದೇ ನಿಬಂಧದ ಸ್ವರೂಪ, ವಿನ್ಯಾಸ, ವಿವರಣೆಯನ್ನು ತಿಳಿಸುವ ಪಕ್ಷಿನೋಟವಾಗಿ ಈ ಅಧ್ಯಾಯವು ಕಂಡು ಬರುತ್ತದೆ.

ಎರಡೂ ಕಾದಂಬರಿಗಳ ವಸ್ತು ಒಂದೇ ಆಗಿದೆ ಅಂದರೆ, ರಾಜಕೀಯ ಪ್ರಜಾಪ್ರಭುತ್ವ ಭಾರತದ ರಾಜಕೀಯದ ಪ್ರಮುಖ ಪ್ರಕ್ರಿಯೆಯಾದ ಚುನಾವಣೆ ಮತದಾನಗಳಲ್ಲಿ ಗ್ರಾಸ್‌ರೂಟ್ ಲೆವೆಲ್‌ನಲ್ಲಿ ಆರಂಭವಾಗುವ ಭ್ರಷ್ಟತೆ ಅಧಿಕಾರಲಾಲಾಸೆ ಅದಕ್ಕೆ ಬಲಿಯಾಗುವ ಆದರ್ಶ ಮತ್ತು ಮಾನವ ಸಂಬಂಧಗಳು, ಇವೆಲ್ಲದವರ ನಡುವೆ ಸಿಕ್ಕು ನಲುಗುವ ಅಮಾಯಕರು ಮತ್ತು ಆದರ್ಶದ ಸೋಲು ಇವುಗಳ ಚಿತ್ರಣವು ಸಮರ್ಪಕವಾಗಿ ಕಂಡುಬರುತ್ತದೆ.

ಅನಂತಮೂರ್ತಿಯವರ ಸೃಜನಶೀಲ ಶೋಧನೆಗೆ ಒಳಪಡುವ ರಾಜಕೀಯ ತೀರಾ ಭಿನ್ನವಾದದ್ದು, ಆದರ್ಶವನ್ನು ಬೆಳೆಸಿಕೊಳ್ಳಬೇಕೆಂಬ ಧೋರಣೆ ಕಂಡು ಬರುತ್ತದೆ. ಸಮಾಜದ ಪ್ರತಿನಿಧಿಯೊಬ್ಬ ವ್ಯವಸ್ಥೆಯನ್ನು ವಿರೋಧಿಸಬೇಕೆಂಬ ಮನೋಭಾವವನ್ನು ಹೊಂದಬೇಕೆಂದು ತಿಳಿಸುತ್ತಾರೆ. ಅನಂತಮೂರ್ತಿಯವರ ಮಾರ್ಗ ಪ್ರತಿಭಾವನೆಯ ಸ್ವರೂಪದ್ದು ವ್ಯಕ್ತಿ ತಾನು ಬೆಳೆಸಿಕೊಂಡು ಬಂದ ಆದರ್ಶವನ್ನು ತೊರೆಯಬಾರದು ಎಂಬುದನ್ನು ಕಾಣಬಹುದು. ವ್ಯವಸ್ಥೆಯನ್ನು ಒಪ್ಪಿಕೊಳ್ಳಲು ಆಗದೆ ವ್ಯವಸ್ಥೆಯನ್ನು ಪೂರ್ತಿಯಾಗಿ ಬಿಡಲು ಆಗದೆ ಗೊಂದಲವನ್ನು ಈ ಕಾದಂಬರಿಯಲ್ಲಿ ಕಾಣಬಹುದು.

ಈ ಕಾರಣದಿಂದಾಗಿ ಅನಿಶ್ಚಿತತೆ ಅಸ್ತಿತ್ವತೆಯ ಗೊಂದಲ, ದ್ವಂದ್ವ ಮನಃಸ್ಥಿತಿಗೆ ವ್ಯಕ್ತಿ ಈಡಾಗುತ್ತಾನೆ ಎಂಬುದನ್ನು ಕಾದಂಬರಿಯು ಧ್ವನಿಸುತ್ತವೆ.

ಮತದಾನ ಕಾದಂಬರಿಯಲ್ಲಿ ನಿಸ್ವಾರ್ಥ ವ್ಯಕ್ತಿಯ ಆದರ್ಶಕ್ಕೂ ಮತ್ತು ರಾಜಕಾರಣಿಯ ಭ್ರಷ್ಟತೆಗೂ ಘರ್ಷಣೆಯೂ ಉಂಟಾಗುತ್ತದೆ ಕೊನೆಗೆ ಆದರ್ಶಕ್ಕೆ ಜಯವು ಉಂಟಾಗುತ್ತದೆ. ಇದಕ್ಕೆ ಪಾತ್ರದಲ್ಲಿರುವ ಧೃಡತೆಯೇ ಕಾರಣವಾಗಿದೆ. ಇಲ್ಲಿನ ಪಾತ್ರಗಳಲ್ಲಿ ತಾವು ತಳೆವ ನಿರ್ಧಾರದ ಬಗ್ಗೆ ಪೂರ್ಣ ವಿಶ್ವಾಸವಿದೆ. ಆದ ಕಾರಣ ಎಲ್ಲಾ ಪಾತ್ರಗಳು ಯಾವುದೇ ಗೊಂದಲಕ್ಕೆ ಒಳಗಾಗುವುದಿಲ್ಲ. ಭ್ರಷ್ಟ ರಾಜಕಾರಣಕ್ಕೆ ಸಿಕ್ಕಿ ನಲುಗುವ ಆದರ್ಶವಾದಿಯ ಪರಿಸ್ಥಿತಿಯೇ ಈ ಕಾದಂಬರಿಯ ಮುಖ್ಯ ಅಂಶವಾಗಿದೆ. ನಾಯಕನ ಆದರ್ಶವನ್ನು ಎತ್ತಿಹಿಡಿಯುವುದೇ ಕಾದಂಬರಿಯ ಮುಖ್ಯ ಧ್ಯೇಯವಾಗಿದೆ.

ಎರಡೂ ಕಾದಂಬರಿಗಳಲ್ಲಿ ಯಾವುದು ಶ್ರೇಷ್ಠ ಮತ್ತು ಯಾವುದು ಶ್ರೇಷ್ಠವಲ್ಲ ಎಂಬುದಕ್ಕಿಂತ ವಿಷಯ ನಿರೂಪಣೆಯಲ್ಲಿ ಅವುಗಳ ಪ್ರಭುತ್ವದ ಔನ್ನತ್ಯವೇ ಕಾದಂಬರಿಯ ಶ್ರೇಷ್ಠತೆಗೆ ಕಾರಣವಾಗಿದೆ – ಆದರೂ ಆದರ್ಶದ ಹಿನ್ನೆಲೆಯಲ್ಲಿ ನಮ್ಮ ದೃಷ್ಟಿ ಮತ್ತು ಪರಿಸರಕ್ಕೆ ಅನುಗುಣವಾಗಿ ನೋಡಿದರೆ ಮತದಾನ ಕಾದಂಬರಿಯನ್ನು ಶ್ರೇಷ್ಠವೆಂದು ಹೇಳಬಹುದಾಗಿದೆ. ಯಾಕೆಂದರೆ, ಕಾದಂಬರಿಯ ನಾಯಕ ಪರಿಸ್ಥಿತಿಗಳಿಂದ, ವ್ಯಕ್ತಿಗಳಿಂದ ಸೋತರೂ ಕೂಡ ತನ್ನ ಆದರ್ಶವನ್ನು ಬಿಟ್ಟು ಬಿಡದೆ ಉಳಿಸಿಕೊಳ್ಳುತ್ತಾನೆ. ಈ ಒಂದು ಅಂಶ ಸಮಾಜಕ್ಕೆ ಬಂದು ಸಂದೇಶವಾಗಿದೆ ಎಂದು ಹೇಳಬಹುದಾಗಿದೆ.

## ಗ್ರಂಥ ಋಣ


೧. ಅವಸ್ಥೆ : **ಯು.ಆರ್. ಅನಂತಮೂರ್ತಿ**
ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ)

೨. ಮತದಾನ : **ಎಸ್.ಎಲ್. ಭೈರಪ್ಪ**
ಸಾಹಿತ್ಯ ಭಂಡಾರ, ಬೆಂಗಳೂರು

೩. ಯು.ಆರ್. ಅನಂತಮೂರ್ತಿ : **ಮುರುಳೀಧರ ಉಪಾಧ್ಯ ಹಿರಿಯಡಕ** (ಸಂ.)
ಕರ್ನಾಟಕ ಸಂಘ ಪುತ್ತೂರು – ೨೦೦೦

೪. ಭೈರಪ್ಪನವರ ಕಾದಂಬರಿಗಳ ಸ್ವರೂಪ : **ಡಾ॥ ಲೀಲಾವತಿ ತೋರಣಗಟ್ಟಿ**
ವಿದ್ಯಾನಿಧಿ ಪ್ರಕಾಶನ, ಗದಗ – ೧೯೯೩

೫. ಭೈರಪ್ಪಾಭಿನಂದನಾ : **ಕೊಂಡಜ್ಜಿ ಕೆ. ವೆಂಕಟೇಶ್** (ಸಂ.)
ಕೊಂಡಜ್ಜಿ ಮುದ್ರಣ ಮತ್ತು ಪ್ರಕಾಶನ, ಬೆಂಗಳೂರು – ೨೦೦೫

೬. ಎಸ್.ಎಲ್. ಭೈರಪ್ಪ : **ದೇಶಕುಲಕರ್ಣಿ**
ನವಕರ್ನಾಟಕ ಪ್ರಕಾಶನ, ಬೆಂಗಳೂರು – ೨೦೦೬

೭. ಕನ್ನಡ ಕಥನ ಸಾಹಿತ್ಯ : ಕಾದಂಬರಿ : **ಜಿ.ಎಸ್. ಅಮೂರ**
ಶ್ರೀಹರಿ ಪ್ರಕಾಶನ, ಧಾರವಾಡ – ೧೯೯೪

೮. ಸಹಸ್ಪಂದನ : **ಮಾಧವ ಕುಲಕರ್ಣಿ ಮತ್ತು ಮ. ಗೋವಿಂದರಾವ್** (ಸಂ.)
ಸಾಹಿತ್ಯ ಭಂಡಾರ ಪ್ರಕಾಶನ, ಬೆಂಗಳೂರು – ೧೯೭೮

೯. ಎಸ್.ಎಲ್. ಭೈರಪ್ಪ ಅವರ ಕೃತಿಗಳ ವಿಮರ್ಶೆ : **ಡಾ॥ ಸುಮತೀಂದ್ರ ನಾಡಿಗ** (ಸಂ.)
ಸುಂದರ ಪ್ರಕಾಶನ, ಬೆಂಗಳೂರು – ೨೦೦೨

೧೦. ನಾನೇಕೆ ಬರೆಯುತ್ತೇನೆ? : **ಎಸ್.ಎಲ್. ಭೈರಪ್ಪ**
ಸಾಹಿತ್ಯ ಭಂಡಾರ ಪ್ರಕಾಶನ, ಬೆಂಗಳೂರು – ೧೯೮೦